CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೩೯ | ಬೆಂಗಳೂರು, ಗುರುವಾರ, ಮಾರ್ಚ್ ೧೧, ೨೦೦೪ (ಫಾಲ್ಗುಣ ೨೧, ಶಕ ವರ್ಷ ೧೯೨೫) | ಸಂಚಿಕೆ ೧೧

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಎ.ಎ. ಇಳಕಲ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಇವರ ವಿರುದ್ಧ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿಗಳನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಜ್ಞಾಪನ ಸಂಖ್ಯೆ: ಸಿಆಸುಇ 128 ಎಸ್‌ಇಎನ್ 2001, ದಿನಾಂಕ: 01.10.2003.

2) ಶ್ರೀ ಎ.ಎ. ಇಳಕಲ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ಉತ್ತರ ದಿನಾಂಕ: 14.11.2003.

**ಪ್ರಸ್ತಾವನೆ:**

ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ ಮಂಡಳಿ, ಧಾರವಾಡ ಇಲ್ಲಿ ವಿಶೇಷ ಭೂ ಸ್ವಾಧೀನ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ, ರಾಜ್ಯ ಉಚ್ಚ ನ್ಯಾಯಾಲಯದ, ಆದೇಶದಂತೆ ಗ್ರಾಸಿಮ್ ಇಂಡಸ್ಟ್ರೀಸ್, ಕುಮಾರ್‌ಪಟ್ಟಣಂ ಅವರಿಗೆ ಸೊಲೇಷಿಯಂ ನೀಡಿದ್ದಾಗೂ ಸಹ ಇದೇ ಪ್ರಕರಣದಲ್ಲಿ ಗ್ರಾಸಿಮ್ ಇಂಡಸ್ಟ್ರೀಸ್‌ನವರು ಸಲ್ಲಿಸಿದ ಮೇಲ್ಮನವಿಯನ್ನು ವಜಾ ಮಾಡಿರುವ ವಿಷಯವನ್ನು ಸರ್ಕಾರಿ ವಕೀಲರ ಮೂಲಕ ರಾಜ್ಯ ಉಚ್ಚ ನ್ಯಾಯಾಲಯದ ಗಮನಕ್ಕೆ ತರದೇ ನ್ಯಾಯಾಲಯದ ತೀವ್ರ ಆಕ್ಷೇಪಣೆಗೆ ಗುರಿಯಾಗುವ ಸಂದರ್ಭ ಸೃಷ್ಟಿಸಿದ ಆರೋಪಕ್ಕಾಗಿ ಶ್ರೀ ಎ.ಎ. ಇಳಕಲ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 01.10.2003ರ ನೋಟೀಸ್ ನೀಡಿ ಸಮಜಾಯಿಷಿ ಕೇಳಲಾಯಿತು. ಈ ನೋಟೀಸ್‌ಗೆ ಶ್ರೀ ಎ.ಎ. ಇಳಕಲ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 14.11.2003ರ ಉತ್ತರ ನೀಡಿ, ಅವರು ಆರೋಪಗಳನ್ನು ನಿರಾಕರಿಸಿದ್ದಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆ ನಡೆಸಲು ಸರ್ಕಾರವು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 128 ಎಸ್‌ಇಎನ್ 2001, ಬೆಂಗಳೂರು, ದಿನಾಂಕ: 31ನೇ ಜನವರಿ 2004**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಎ.ಎ. ಇಳಕಲ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ರೂ.5000-00 ಗೌರವಧನ ಹಾಗೂ ರೂ.1000-00 ವಾಹನ ಭತ್ಯೆ ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಬಿ. ಕುಮಾರ್, ಸಹಾಯಕ ಕಾರ್ಯದರ್ಶಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು, ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸುತ್ತದೆ. ವಿಚಾರಣಾಧಿಕಾರಿಗೆ ಸ್ಥಳಾವಕಾಶ, ಸ್ಟೇಷನರಿ, ಶೀಘ್ರಲಿಪಿಗಾರರ ಸೇವೆಯನ್ನು ಒದಗಿಸಲು ಕಾರ್ಯಕಾರಿ ಸದಸ್ಯರು ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ ಮಂಡಳಿ, ಅವರು ಕ್ರಮ ಕೈಗೊಳ್ಳುತ್ತಾರೆ.

ವಿಚಾರಣೆಯನ್ನು 3 ತಿಂಗಳ ಒಳಗೆ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 134 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** 'ಅಂಗವಿಕಲರ ಕಲ್ಯಾಣ' ನಿರ್ದೇಶನಾಲಯವನ್ನು **'ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ನಿರ್ದೇಶನಾಲಯ'** ಎಂದು ಮರುನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಮಮಅ:314:ಎಸ್‌ಜೆಡಿ:2003, ದಿನಾಂಕ: 05.09.2003.
2) ಸರ್ಕಾರದ ಆದೇಶ ಸಂಖ್ಯೆ: ಮಮಇ:314:ಎಸ್‌ಜೆಡಿ:2003 (ಭಾಗ-2) ದಿನಾಂಕ: 24.09.2003.
3) ಪತ್ರ ಸಂಖ್ಯೆ: ನಿಅಕಇ ಯೋಜನೆ:24:2003-2004:9160, ದಿನಾಂಕ: 20.10.2003.

**ಪ್ರಸ್ತಾವನೆ:**

ಹಿರಿಯ ನಾಗರೀಕರಿಗೆ ಆರೋಗ್ಯ ಶುಶ್ರೂಷೆ ವಸತಿ ಹಾಗೂ ಇನ್ನಿತರೆ ಸೌಲಭ್ಯಗಳನ್ನು ಒದಗಿಸುವ ಉದ್ದೇಶದಿಂದ ಸರ್ಕಾರವು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಆದೇಶದಲ್ಲಿ ಕಾರ್ಯನೀತಿಯನ್ನು ಹೊರಡಿಸಿರುತ್ತದೆ. ಸದರಿ ಕಾರ್ಯನೀತಿಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸುವುದನ್ನು ಉಸ್ತುವಾರಿ ಮಾಡಲು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಮೇಲೆ ಕ್ರಮ ಸಂಖ್ಯೆ (2) ರಲ್ಲಿನ ಆದೇಶದ ರೀತ್ಯಾ ಟಾಸ್ಕ್‌ಫೋರ್ಸ್ ರಚನೆ ಮಾಡಲಾಗಿದೆ. ಹಿರಿಯ ನಾಗರೀಕರಿಗಾಗಿ ಹೊರಡಿಸಿರುವ ಕಾರ್ಯನೀತಿಯನ್ನು ಅಂಗವಿಕಲರ ಕಲ್ಯಾಣ ಇಲಾಖೆಯಿಂದ ಅನುಷ್ಠಾನಗೊಳಿಸಬೇಕಾಗಿರುವುದರಿಂದ ದಿನಾಂಕ: 29.09.2003 ರಂದು ಮಾನ್ಯ ಮುಖ್ಯಮಂತ್ರಿಗಳು ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ರಾಜ್ಯದ ಹಿರಿಯ ನಾಗರೀಕರ ಹಿತರಕ್ಷಣಾ ಕಾರ್ಯಪಡೆಯ ಸಭೆಯಲ್ಲಿ 'ಅಂಗವಿಕಲರ ಕಲ್ಯಾಣ ನಿರ್ದೇಶನಾಲಯ'ವನ್ನು 'ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ನಿರ್ದೇಶನಾಲಯ' ಎಂದು ಮರುನಾಮಕರಣ ಮಾಡಲು ನಿರ್ಧರಿಸಲಾಗಿದೆ.

ಅದರಂತೆ ಈ ಸಂಬಂಧ ಸರ್ಕಾರದ ಆದೇಶ ಹೊರಡಿಸಬೇಕೆಂದು ಕೋರಿ ನಿರ್ದೇಶಕರು : ಅಂಗವಿಕಲರ ಕಲ್ಯಾಣ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ: 3 ರಲ್ಲಿನ ಪತ್ರದೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಈ ಕೆಳಗಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಅ:460:ಪಿಹೆಚ್‌ಪಿ:2003:4, ಬೆಂಗಳೂರು, ದಿನಾಂಕ: 27ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ "ಅಂಗವಿಕಲರ ಕಲ್ಯಾಣ ನಿರ್ದೇಶನಾಲಯ" ವನ್ನು ಈ ಕೂಡಲೇ ಜಾರಿಗೆ ಬರುವಂತೆ **"ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ನಿರ್ದೇಶನಾಲಯ"** ಎಂದು ಮರುನಾಮಕರಣ ಮಾಡಲಾಗಿದೆ.

ಈ ಆದೇಶವನ್ನು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ದಿನಾಂಕ: 29.09.2003 ರಂದು ನಡೆದ ಕರ್ನಾಟಕ ರಾಜ್ಯದ ನಾಗರೀಕರ ಹಿತರಕ್ಷಣಾ ಕಾರ್ಯಪಡೆ ಸಭೆಯ ತೀರ್ಮಾನದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಂ. ಚಂದ್ರಮ್ಮ**

ಪಿ.ಆರ್. 136 ಸರ್ಕಾರದ ಅಧೀನ ಕಾರ್ಯದರ್ಶಿ,

ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ.

## FINANCE SECRETARIAT
## OFFICIAL MEMORANDUM
**No: FD 14 BPA 2003, Bangalore, Dated: 5th December 2003**

**Subject:** Re-constitution of Ad-hoc Committee in the Secretariat for expediting the clearance of outstanding inspection Reports and Audit objections.

**Reference:** O.M. No. : FD (Spl) 686 PEN 67, dated 30-03-1968.

Instructions were issued in Official Memorandum No: FD (Spl) 686 PEN 67, dated 30-03-1968 for the prompt clearance of outstanding Inspection Reports and Audit Objections. It has been observed that in spite of these instructions the position has further deteriorated in as much as the total number of outstanding Inspection Reports and Audit Objections are on the increase. The effectiveness of Audit depends entirely on the timely rectification of the defects and irregularities pointed by the Audit. The delay in the clearance of Inspection Reports and Audit Objections not only defeats the very purpose of Audit but will eventually render it difficult to clear them on account of the inherent difficulties involved in tracing the old records.

The existing composition of the Committee was as follows:

| | | | | |
|---|---|---|---|---|
| I | 1) | Secretary to Government in the concerned Administrative Department | – | Chairman |
| | 2) | The Head of the Department concerned | – | Member |

3) The Budget Officer and Ex-Officio Deputy Secretary to Government, Finance Department OR any representative of the Finance Department – Member
4) One Deputy Accountant General nominated by the Accountant General – Member

II There was an Adhoc Committee for each of the following Departments of the Secretariat:

1) Public Works Department
2) Education Department
3) Agriculture and Forest Department
4) Commerce and Industries Department
5) Health and Municipal Administrative Department.
6) Home Department
7) Planning and Social Welfare Department
8) Development, Housing and Panchayath Raj Department
9) Food and Civil Supplies and Labour Department
10) Revenue Department.

III Since the above Department Committees were constituted during 1968, now the Composition of the Committee shall be as follows :

(a) Secretary to Government in the concerned Administrative Department – Chairman
(b) The Head of the Department concerned – Member
(c) The Controller (A.M.), and Ex-Officio Secretary to Government, Finance Department – Member
(d) Deputy Secretary (B&R) OR any other representative of Finance Department – Member
(e) Deputy Accountant General / Senior Deputy Accountant General nominated by Accountant General – Member
f) I.F.A. of the Department (wherever IFA's are there) – Member

IV There shall be an Adhoc Committee for each of the following Departments of the Secretariat :

1) Agriculture & Horticulture
2) Animal Husbandry
3) R.D.P.R.
4) Urban Development
5) Housing
6) Home and Transport
7) Tourism
8) Kannada and Culture
9) Information
10) Youth Services
11) Social Welfare
12) Women & Child Development Department
13) Infrastructure Development Department
14) Information Technology Department
15) Commerce and Industries
16) P.W.D.
17) Water Resources Department
18) DPAR
19) Education
20) Health and Family Welfare
21) Food and Civil Supplies
22) Law
23) Revenue
24) Labour
25) Medical Education
26) Planning and Statistics
27) Energy
28) Co-Operation
29) Small Savings & Lotteries
30) Commercial Tax
31) Excise
32) K.G.I.D.
33) Treasuries

Other aspects will be as given in O.M. No. FD (Spl) 686 PEN 67, dated: 30-3-1968 and would also cover the following:

(a) Computerizing the Audit Report paras and Accountant General's observations on Accounts.
(b) Prescribe a Common MIS for quarterly review in the IFA's Meetings.
(c) Address endemic problems in systems and procedures arising out of the Inspection Reports / Paras.

**AMLAN ADITYA BISWAS**
Deputy Secretary to Government,
Finance Department (B & R).

PR-135

## FOREST, ECOLOGY AND ENVIRONMENT SECRETARIAT

**Subject:** Empowerment of Panchayat Raj Institutions in view of 73rd Amendment to the Constitution in regard to matter concerning Social Forestry/Farm Forestry.

**PREAMBLE:**

In view of the 73rd Amendment to the Constitution of India and the provisions made therein for empowerment of Panchayat Raj Institutions, the Government of Karnataka have taken a lead role in empowering the Panchayat Raj Institutions. Decentralization of power is one of the main agenda items of the Government. In order to enchance the scope of activities of the Panchayat Raj Institutions through resource mobilization, the 2nd Finance Commission has taken up discussions of the Departments including the Forest, Environment & Ecology Department. During the meeting of the commission on 18.12.2002, the Chairman of the Commission desired that in respect of Social Forestry, Farm Forestry and other associated activities pertaining to the Panchayat Raj Institutions, adequate resources should made available for these activities. It was also suggested that the revenues generated through these activities should accrue to the Panchayat Raj Institutions.

The Government of Karnataka had appointed a Working Group on Decentralisation under the Chairmanship of the Additional Chief Secretary and Development Commissioner, Government of Karnataka for indepth study and working of Panchayat Raj Institutions, and to come up with strategies and recommendations. The Working Group had submitted the report during March, 2002.

In this regard a number of meetings were held. In the meetings, recommendations in the report of the Working Group of Decentralisation (March 2002) under the Chairmanship of the Additional Chief Secretary and Development Commissioner, Government of Karnataka in respect of Social Forestry and Minor Forest produce were reviewed. It was observed that some of the recommendations are not in conformity with the provisions of law and need to be modified. After detailed discussions, it was decised to distribute the functions of Social Forestry and Farm Forestry among the Panchayat Raj Institutions. Hence the following order.

**GOVERNMENT ORDER NO. FEE 50 FAP 2000, BANGALORE, DATED: 5th February 2004**

In the circumstances explained in the preamble Government of Karnataka is pleased to make the following order:-

(a) The distribution of functions of Social Forestry/Farm Forestry activities among the Panchayat Raj Institutions shall be as detailed below:-

| Activity | Distribution of Functions | | |
|---|---|---|---|
| | Zilla Panchayat | Taluk Panchayat | Grama Panchayat |
| 1 | 2 | 3 | 4 |
| Social Forestry Farm Forestry. | 1. Planning, propagating, promoting, developing, protecting and managing social forestry assets including MFPs/ NTFPs in the areas under their control & farm forestry activities in the district. | 1. Planning, propagating, promoting, developing, protecting and managing social forestry assets including MFPs/ NTFPs in the areas under their control & farm forestry activities in the Taluka. | 1. Planning, propagating, promoting, developing, protecting and managing social forestry assets including MFPs/ NTFPs in the areas under their control & farm forestry activities within the area of Gram Panchayat |
| | 2. Establish & maintain forest nurseries for raising plantations and for public distribution. | 2. Procure seedlings for their own use and for public distribution from Zilla Panchayat / decentralized nurseries. Encourage decentralized nurseries in the private sector. | 2 Procure seedlings for their own use and for public distribution from Zilla Panchayat / Taluk Panchayat |
| | 3. Monitoring the use of seedlings given for farm forestry. | 3. Monitoring the use of seedlings given for farm forestry. | 3 Monitoring the use of seedlings given for farm forestry. |

| 1 | 2 | 3 | 4 |
|---|---|---|---|
| | 4. Constitute Bio diversity management committee for the purpose of promoting conservation, sustainable use and documentation of biological diversity. | | |
| Training | Organise training for scientific development, management and marketing of forest produce including value addition to MFP / NTFP resources. | | |
| Collection, and processing of Forest Produces. | 1. Organise scientific collection, processing and marketing of forest produce under their control. | 1. Organise scientific collection, processing and marketing of forest produce under their control. | 1. Organise scientific collection, processing and marketing of forest produce under their control. |
| | 2. Establish small scale industrial units for value addition. | 2. Establish small scale industrial units for value addition. | 2. Promote collection, primary processing and handling of forest produce before selling. |
| | 3. Establish storage facility. | 3. Establish storage facility. | |
| Marketing of fuel / fodder and timber | 1. Arrange for disposal of forest produce effectively or take the help of Karnataka Forest Department in this regard, if required. | 1. Arrange for disposal of forest produce effectively or take the help of Zilla Panchayat or Karnataka Forest Department, if required. | 1. Arrange for disposal of forest produce effectively or take the help of Zilla Panchayat / Taluk Panchayat or Karnataka Forest Department, if required.<br>1.2.Arrange for preferential/ sale of Forest Produce at market rates for the bonafide use of the residents of the village from the areas under their control. |
| | 2. Strengthen market intelligence and market extension. | | |
| Sharing | One hundred percent net returns from the forest produce from the areas under its control/ belonging to Zilla Panchayat. | One hundred percent net returns from the forest produce from the areas under its control/ belonging to Taluk Panchayat. | One hundred percent net returns from the forest produce from the areas under its control/ belonging to Gram Panchayat. |
| Reinvest-ment | The Zilla Panchayat shall ensure that a minimum of 50% net returns from the plantation assets under Social Forestry programme be reinvested for creation and management of plantation assets. | The Taluk Panchayat shall ensure that a minimum of 50% net returns from the plantation assets under Social Forestry programme be reinvested for creation and management of plantation assets. | The Grama Panchayat shall ensure that a minimum of 50% net returns from the plantation assets under Social Forestry programme be reinvested for creation and management of plantation assets.. |

| 1 | 2 | 3 | 4 |
|---|---|---|---|
| Formation of Committee under PRA. | The Standing Committee constituted under Sec. 186(e) (Agriculture & Industry) may look after social forestry and farm forestry in the district. | The Standing Committee constituted under Sec. 148(b) (Finance, Audit & Planning) may look after social forestry and farm forestry in the taluk. | A Committee may be constituted under Sec. 61(A) to look after social forestry and farm forestry activities in the Gram Panchayat. |
| Staff arrange-ment. | 1.1 The entire staff of Social Forestry division attached to the ZP should be under the administrative control of ZP. | 1.1 All the programmes have to be technically scruti-nized and sanctioned by ACF/ DCF-SF/ CF of the Circle as per the financial code. | 1.1 All the programmes have to be technically scrutinized and sanctioned by ACF/ DCF-SF/ CF of the Circle as per the financial code. |
| | 1.2 All the programmes have to be technically scrutinized and sanctioned by the Assistant Conservators of Forests / the Deputy Conservators of Forests, Social Forestry/ CFs of the Circles as per the financial code of Zilla Panchayat. | 1.2 The execution of works shall be carried out as per the provisions of the Panchayat Raj Act. | 1.2 The execution of works shall be carried out as per the provisions of the Panchayat Raj Act. |
| | 1.3 The execution of works shall be carried out as per the provisions of the Panchayat Raj Act. | | |

The Rural Development & Panchayat Raj Department Shall find out ways in which the net sale proceeds of forest produce can be remitted as revenue to Zilla Panchayats, since there is no such provision for receipt of revenue under Zilla Panchayat Act.

By Order and in the Name of the Governor of Karnataka,

**H.V. RAMACHANDRA RAO**

Desk Officer (Planning)

Forest, Ecology and Environment Department.

P.R. 143

**Subject:** Diversion of 38.45 ha. of forest land for renewal of mining lease No.1659 in favour of M/s Mysore Minerals Ltd., in Jambunathanahally in Bellary District.

**Read:**
1) Letter No.A5(B1)MNG.CR.44/99-2000, dated: 27.3.2000, 1.3.2001, 5.8.2003 and 7.1.2004 of the Principal Chief Conservator of Forests, Bangalore.
2) State Government letter No: FEE 63 FFM 99, dated: 31.5.2000, 11.4.2001, 13.2.2003, 16.6.2003, 7.8.2003, 29.8.2003 and 12.1.2004.
3) Government of India, New Delhi lr.No.F.No.2-1/99-FC, dated: 5.2.2003.
4) Government of India, Ministry of Environment and Forests, New Delhi Letter No.8-58/2000-FC dated: 27.6.2000, 19.5.2003, 11.8.2003 and 16.01.2004.

**PREAMBLE:**

The Principal Chief Conservator of Forests, Bangalore has sent proposal vide his letter dated: 27.3.2000 read at (1) above for renewal of mining lease No.1659 under Forest (Conservation) Act, 1980 over an area of 38.45 ha. of forest land in Jambunathanahalli Village of Hospet Taluk, Bellary District in favour of M/s Mysore Minerals Ltd., Bangalore subject to certain conditions.

The Proposal of Principal Chief Conservator of Forests, Bangalore was recommended to Government of India, Ministry of Environment and Forests, New Delhi vide letter of even number dated: 31.5.2000 read at (2) above and its approval was sought under Forest (Conservation) Act, 1980 for renewal of mining lease No.1659 in favour of M/s Mysore Minerals Ltd.

Government of India, Ministry of Environment and Forests, New Delhi vide their letter dated: 27.6.2000 read at (4) above has requested to furnish some additional information and the same has been furnished by the Principal Chief Conservator of Forests, Bangalore vide their letter dated: 1.3.2001 read at

(1) above and the same has sent to Government of India vide State Government letter dated: 11.4.2001 read at (2) above.

Government of India, Ministry of Environment and Forests, New Delhi vide their letter dated: 5.2.2003 read at (4) above has conveyed for grant of six months temporary working permission with effect from 5.2.2003 subject to certain conditions that no fresh area shall be broken up and all environmental safeguards shall be adhered to. Accordingly State Government has communicated the same to Principal Chief Conservator of Forests, Bangalore vide letter dated: 13.2.2003 read at (2) above.

Government of India, Ministry of Environment and Forests, New Delhi vide their letter dated: 19.5.2003 read at (3) above has conveyed in-principle approval (Stage-1) for diversion of 38.45 ha. of forest land for renewal of mining lease No.1659 in favour of M/s Mysore Minerals Ltd., in Jambunathanahally Village, Bellary District subject to fulfillment of certain conditions. The same has been communicated to Principal Chief Conservator of Forests, Bangalore vide State Government letter dated: 16.6.2003 read at (2) above.

The Principal Chief Conservator of Forests, Bangalore vide letter dated: 5.8.2003 has requested the State Government to recommend the Government of India for further extension of temporary working permission for a period of one year. Accordingly State Government has recommended to Government of India vide letter dated: 7.8.2003 read at (2) above and Government of India in their letter dated: 11.8.2003 has conveyed its approval for extension of temporary working permission over already broken up area of 27.71 ha. for a period of 6 months with effect from 5.8.2003 for continuing the mining in respect of renewal of mining lease No.1659 in favour of M/s Mysore Minerals Ltd. Accordingly the same has been communicated to Principal Chief Conservator of Forests, Bangalore vide letter dated: 29.8.2003 read at (2) above.

The Principal Chief Conservator of Forests, Bangalore vide his letter 7.1.2004 has furnished the compliance report, and the same has been communicated to Government of India vide State Government letter dated: 12.1.2004 read at (2) above.

Finally Government of India Ministry of Environment and Forests, New Delhi, vide their letter dated: 16.1.2004 has conveyed its approval under Section 2 of under Forest (Conservation) Act, 1980 for diversion of 38.45 ha. of forest land for renewal of mining lease No.1659 in favour of M/s Mysore Minerals Ltd. in Jambunathanahally Village, Bellary District subject to certain conditions.

The proposal has been examined in detail and hence the following orders.

**GOVERNMENT ORDER NO. FEE 63 FFM 99, BANGALORE, DATED: 5th February 2004**

After examining all aspect of the matter and in view of the approval accorded to the proposal by the Government of India, Ministry of Environment and Forests, New Delhi, Government are pleased to accord its approval under Section-2 of under Forest (Conservation) Act, 1980 for diversion of 38.45 ha. of forest land for renewal of ML No.1659 in favour of M/s Mysore Minerals ltd., in Jambhunathanahally Village, Hospet Taluk, Bellary District subject to the following conditions.

1. Legal status of the forest land shall remain unchanged.
2. Compensatory afforestation shall be raised over 36.65 ha. of non-forest and shall be maintained at the project cost by the State Forest Department.
3. The non-forest land for compensatory afforestation shall be notified by the State Government as RF under Section-4 or as PF under section 29 of the Indian Forest Act, 1927 or the State Forest Act prior to the transfer of forest land to the User Agency.
4. To demarcate the area, four feet high RCC pillars with forward and back bearing shall be erected and maintained by the User Agency at the project cost.
5. The 1.80 ha. proposed for buildings and stockyard shall be maintained as green cover by the user agency at the project cost.
6. The User Agency will take up the works of road maintenance, soil and conservation works, afforestation works, construction of retaining wall and development of benches of 6 mts. at the mines at the project cost as per the undertaking given by them. Conservator of Forests/Bellary Circle will submit report on these issues including benching to the Regional Office after 6 (six) months and these works will be monitored by the DCF/CF, Regional Office, Bangalore.
7. A safety Zone shall be created and maintained and plantation will be raised and maintained over an area one and half times to the extent of the safety Zone at the project cost by the State Forest Department, if not done earlier.
8. No tree felling shall be done.

9. No labour camps shall be established on the forest land.
10. Sufficient firewood shall be provided by the User Agency to the labourers at the project cost after purchase from the State Forest Department/Forest Development Corporation.
11. The user agency shall ensure that there should be no damage to the available wildlife, if any.
12. The approval under the Forest (Conservation) Act, 1980 is subject to the clearance under the Environment (Protection) Act, 1986, if a applicable.
13. The diversion period shall be co-terminus with the current lease granted under MMRD Act, 1957.
14. The forest land shall not be used for any purpose other than that specified in the proposal.
15. The lessee shall deposit the amount at prevailing rate towards raising of compensatory afforestation over 38.45 ha. in non-forest land.
16. The lessee shall pay usual lease rent and supervision charges as prescribed by the Government from time to time.
17. The lessee shall take up planting work on the static dumps during the advance quarrying operations.
18. The lessee shall undertake the afforestation measures in vacant area of the leased area.
19. The lessee shall under take to protect rigidly the leased area and forest area surrounding the area upto one Km. from the leased area.
20. The lessee shall not cut any trees without prior permission of the Forest Department and all produce of permitted fellings shall be handed over to Forest Department under cover of receipt. Transportation of ore should be strictly as per transit rules in force.
21. The lessee shall abide by all the conditions prescribed by Government of India and Government of Karnataka.
22. The lessee shall execute an agreement with the Forest Department binding himself to abide by all usual conditions and terms as per orders of the Government as well as Principal Chief Conservator of Forests.
23. In case of violation of agreement condition of Forest Department shall have right to suspend the mining activities.
24. Any other condition that the Government of India/State Government/Principal Chief Conservator of Forests, may impose from time to time for the protection and improvement of flora and fauna in the forest area.

By Order and in the Name of the Governor of Karnataka,

**S.R. VATSALA**

PR-144

Under Secretary to Government,
Forest, Ecology and Environment Department.

**Subject:** Diversion of 2.26 ha of forest land for the purpose of construction of 66 KV DC line from Hanur to P.G. Palya.

**Read:**
1) Letter No.A5(3)GFI.CR.5/03-04, dated: 20.6.2003 and 24/29.9.2003 of Principal Chief Conservator of Forests, Bangalore.
2) State Government letter No.FEE 177 FGL 2001, dated: 18.7.2003 and 15.10.2003.
3) Letter No.F(C)A/11.2/226/KAR/TL/1018, dated: 19.8.2003 and 11.11.2003 of Government of India, Ministry of Environment and Forests, Regional Office, (South Zone), Bangalore.

**PREAMBLE:**

The Principal Chief Conservator of Forests, Bangalore vide his letter dated: 20.6.2003 read at (1) above has submitted a proposal to State Government for diversion of an area 2.26 ha. of forest land in Yedayrahalli reserve forest under Forest (Conservation) Act 1980, for construction of 66/11 KV Station at P.G. Palya, Kollegala Taluk, Chamarajanagar District in favour of Karnataka Power Transmission Corporation Limited, Mysore.

Accordingly, the proposal was recommended to Government of India for approval under section (2) of Forest (Conservation) Act 1980 vide State Government letter dated: 18.7.2003 read at (2) above

The Government of India Ministry of Environment and Forests, Regional Office, (South Zone), Bangalore has agreed to the proposal in principle (Stage-I) vide their letter dated: 19.8.2003 read at (3) above subject to condition to the cost of raising compensatory afforestation over an extent of 4.52 ha. of degraded forest land shall be recovered from the user agency.

The compliance report on the condition has been sent to Government of India vide State Government letter dated: 15.10.2003 read at (2) above.

The Government of India, Ministry of Environment and Forests, Regional Office, (South Zone), Bangalore in their letter dated: 11.11.2003 read at (3) above has conveyed its final approval (Stage-II) in accordance with Section 2 of Forest (Conservation) Act, 1980 for the diversion of 2.26 ha. of forest land in Yedayarahalli reserve forest in Kollegal Forest Division, Chamarajnagar District for construction of 66 KV DC line from existing 66/11 KV at Hanur to proposed 66/11 KV station at P.G. Palya, Kollegal Taluk in favour of Karnataka Power Transmission Corporation Ltd., Mysore with certain conditions.

The proposal has been examined in light of the final approval given by The Government of India and the following orders are issued.

**GOVERNMENT ORDER NO. FEE 177 FGL 2001, BANGALORE, DATED: 30th January 2004**

After careful consideration of the proposal and under the circumstances explained in the preamble Government are pleased to accord approval under section (2) of Forest (Conservation) Act 1980 for diversion of 2.26 ha. of forest land in Yedayarahalli reserve forest in kollegal Forest Division, Chamarajnagar District for construction of 66 KV DC line from existing 66/11 KV at Hanur to the proposed 66/11 KV station at P.G. Palya, Kollegal Taluk in favour of Karnataka Power Transmission Corporation Ltd., Mysore subject to the following conditions.

1. The legal status of forest land shall remain unchanged.
2. The felling of trees in forest area for the project shall be regulated in accordance with the instructions contained in Annexure V of the guidelines issued under Forest (Conservation) Act, 1980.
3. The State Government shall charge the net present value of the forest area diverted under this proposal from the user agency as per the orders of the Hon'ble Supreme Court of India dated: 30.10.2002 and 01.08.2003 in IA No.56 6 in W.P.© No.202/1995 and as per the guidelines issued by Ministry of Environment and Forests, New Delhi vide letters No.5-1/1998-FC (Pt.II) dated: 18.9.2003 and 22.9.2003 in this regard.
4. The diversion of said scheduled forest land may be granted for 30 years with effect from the date of this order and total forest area utilized for the project shall not exceed 2.26 ha. It should be used only for the purpose for which it is diverted. In case the land is not used for the stipulated purpose or when it is no longer needed for the stipulated purpose the area would automatically be a part of the notified forest and under the control of Forest Department.
5. The lessee has to pay the lease rent fixed by the Government from time to time.
6. The compensatory afforestation shall be raised at the cost of user agency in 4.52 ha. of degraded forest area. The user agency have to pay the charges of compensatory afforestation at the rate prevailing at the time of approval (Now it is Rs.54,200.00 per ha.).
7. The user agency shall pay the extraction charges of trees as estimated by the concerned Deputy Conservator of Forests from the proposed land.
8. Any violation other than the permitted conditions will be dealt under Karnataka Forest Act, Karnataka Forest Rules Forest (Conservation) Act, 1980 and Forest (Conservation) Rules 2003.
9. Any other conditions to be stipulated by the Government of India/State Government/Principal Chief Conservator of Forests, Karnataka in the interest of conservation of forests.

By Order and in the Name of the Governor of Karnataka,

**S.R. VATSALA**

PR-145

Under Secretary to Government,
Forest, Ecology and Environment Department.

**ಆರ್ಥಿಕ ಸಚಿವಾಲಯ**

**ತಿದ್ದುಪಡಿ ಆದೇಶ ಸಂಖ್ಯೆ: ಆಇ 1889, ವೆಚ್ಚ-6:2003, ಬೆಂಗಳೂರು ದಿನಾಂಕ: 9ನೇ ಜನವರಿ 2004**

ಸರ್ಕಾರದ ಆದೇಶ ಸಂಖ್ಯೆ: ಆಇ 1889 ವೆಚ್ಚ-6:2003, ದಿನಾಂಕ: 9.9.2003ರ ಆದೇಶದಲ್ಲಿರುವ ಲೆಕ್ಕ ಶೀರ್ಷಿಕೆ 2215-01-196-2-01 (ಯೋಜನೇತರ) ಎನ್ನುವುದಕ್ಕೆ ಬದಲಾಗಿ 2215-01-197-2-01-300 (ಯೋಜನೇತರ) ಎಂದು ತಿದ್ದಿಕೊಂಡು ಓದುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಬಸವರಾಜ್**

ಪಿ.ಆರ್. 138

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಜಿ.ಪಂ.).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಪಟ್ಟಾಬಿರಾಮುಲು ನಿವೃತ್ತ ಅಧೀಕ್ಷಕ ಅಭಿಯಂತರರು ಇವರಿಗೆ ರಜೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಶ್ರೀ ಪಟ್ಟಾಭಿರಾಮುಲು ನಿವೃತ್ತ ಅಧೀಕ್ಷಕ ಅಭಿಯಂತರರು ಇವರ ಮನವಿ ದಿನಾಂಕ: 27.11.2002.

**ಪ್ರಸ್ತಾವನೆ:**

ಶ್ರೀ ಪಟ್ಟಾಭಿರಾಮುಲು, ನಿವೃತ್ತ ಅಧೀಕ್ಷಕ ಅಭಿಯಂತರರು ಇವರು ಮೇಲೆ ಓದಲಾದ ಮನವಿಯಲ್ಲಿ ಅವರು ಅಂದು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ರಾಗಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಚಿಂಚೋಳಿ, ಇಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ತಮ್ಮನ್ನು ಅಧಿಸೂಚನೆ ಸಂಖ್ಯೆ: ಆರ್‌ಡಿಪಿ 233 ವಿಆರ್‌ಡಬ್ಲ್ಯೂ 87, ದಿನಾಂಕ: 6.7.87 ರಲ್ಲಿ PHE ಮೆಕ್ಯಾನಿಕಲ್ ಉಪ ವಿಭಾಗ, ಗುಲ್ಬರ್ಗಾ ಇಲ್ಲಿಗೆ ವರ್ಗಾಯಿಸಿದ್ದರಿಂದ ಇವರು ದಿನಾಂಕ: 21.7.87 ರಂದು ಕರ್ತವ್ಯದಿಂದ ಬಿಡುಗಡೆ ಹೊಂದಿ ವರ್ಗಾಯಿಸಿದ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ಅಧಿಸೂಚನೆ ಸಂಖ್ಯೆ: ಆರ್‌ಡಿಪಿ 50 ಸೇಶಿಕಾ 87, ದಿನಾಂಕ: 24.9.87 ರಲ್ಲಿ ಇವರ ಸೇವೆಯನ್ನು ದಿನಾಂಕ: 6.7.87ರ ಅಧಿಸೂಚನೆಯಲ್ಲಿ ಹೊರಡಿಸಿದ ಆದೇಶವನ್ನು ರದ್ದುಪಡಿಸಿ ಇವರನ್ನು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಆಳಂದ ಇಲ್ಲಿಗೆ ನೇಮಿಸಲಾಗಿತ್ತೆಂದು, ನಂತರ ದಿನಾಂಕ: 24.11.87ರ ಅಧಿಸೂಚನೆ ಸಂಖ್ಯೆ: ಆರ್‌ಡಿಪಿ 51 ಸೇಶಿಕಾ 87 ರಲ್ಲಿ ಇವರನ್ನು ಆಳಂದಗೆ ನೇಮಿಸಿದ ಆದೇಶವನ್ನು ರದ್ದುಪಡಿಸಿ ಮೆಕ್ಯಾನಿಕಲ್ ಉಪ ವಿಭಾಗ, ಗುಲ್ಬರ್ಗಾ ಇಲ್ಲಿಗೆ ನೇಮಿಸಲು ಇವರ ಸೇವೆಯನ್ನು ಮುಖ್ಯ ಇಂಜಿನಿಯರ್, PHE ಗೆ ನೀಡಲಾಗಿತ್ತೆಂದು ಅದರಂತೆ ಮುಖ್ಯ ಇಂಜಿನಿಯರ್ ರವರು ದಿನಾಂಕ: 1.12.87 ರಂದು ನೀಡಿದ್ದ ಆದೇಶದನ್ವಯ ಇವರು ದಿನಾಂಕ: 3.12.87 ರಂದು ಕರ್ತವ್ಯಕ್ಕೆ ಹಾಜರಾಗಿದ್ದು, ಈ ಹಿನ್ನೆಲೆಯಲ್ಲಿ ದಿನಾಂಕ: 22.7.87 ರಿಂದ 2.12.87ರ ಅವಧಿಯನ್ನು, ದಿನಾಂಕ: 22.7.87 ರಿಂದ 18.11.87 ರವರೆಗೆ ಗಳಿಕೆ ರಜೆ ಮತ್ತು 19.11.87 ರಿಂದ 2.12.87 ರವರೆಗೆ ಅರ್ಧ ವೇತನ ರಜೆ ಎಂದು ಪರಿಗಣಿಸುವಂತೆ ಕೋರಿರುತ್ತಾರೆ.

ಸದರಿ ಮನವಿಯನ್ನು ಕೂಲಂಕೂಷವಾಗಿ ಪರಿಶೀಲಿಸಿ, ಮಹಾಲೇಖಾಪಾಲರು ದಿನಾಂಕ: 3.2.2000ದ ಪತ್ರದಲ್ಲಿ ಇವರ ಲೀವ್ ಟೈಟಲ್ ಬಗ್ಗೆ ನೀಡಿದ ಮಾಹಿತಿಯಂತೆ ಇವರಿಗೆ ದಿನಾಂಕ: 22.7.87 ರಿಂದ 2.12.87ರ ಅವಧಿಯನ್ನು, ದಿನಾಂಕ: 22.7.87 ರಿಂದ 18.11.87 ರವರೆಗೆ ಗಳಿಕೆ ರಜೆ ಮತ್ತು 19.11.87 ರಿಂದ 2.12.87ರ ಅವಧಿಗೆ ಅರ್ಧ ವೇತನ ರಜೆ ಎಂದು ಮಂಜೂರು ಮಾಡಲು ತೀರ್ಮಾನಿಸಿದೆ. ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 377 ಜಿಪಅ 2002, ಬೆಂಗಳೂರು, ದಿನಾಂಕ: 31ನೇ ಜನವರಿ 2004**

ಪ್ರಸ್ತಾವನೆಯಲ್ಲಿ ತಿಳಿಸಿರುವ ಕಾರಣಗಳಿಂದಾಗಿ ಶ್ರೀ ಪಟ್ಟಾಭಿರಾಮುಲು, ನಿವೃತ್ತ ಅಧೀಕ್ಷಕ ಅಭಿಯಂತರರು, ಇವರಿಗೆ ಅವರ ಹಕ್ಕಿನಲ್ಲಿರುವ ರಜೆ ಎಂದು ಮಂಜೂರು ಮಾಡಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 114 ರನ್ವಯ ದಿನಾಂಕ: 22.7.87 ರಿಂದ 2.12.87ರ ಅವಧಿಯನ್ನು ದಿನಾಂಕ: 22.7.87 ರಿಂದ 18.11.87 ರವರೆಗೆ ಗಳಿಕೆ ರಜೆ ಮತ್ತು 19.11.87 ರಿಂದ 2.12.87ರ ಅವಧಿಯನ್ನು ಅರ್ಧ ವೇತನ ರಜೆ ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಪಿ.ಆರ್. 147

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಶ್ರೀ ಬೂವನಹಳ್ಳಿ ನಾಗರಾಜ್, ರೇಷ್ಮೆ ಸಹಾಯಕ ನಿರ್ದೇಶಕರು, (ಪ್ರಸ್ತುತ ನಿಯೋಜನೆ ಮೇಲೆ ಸಂಪಾದಕರು, ಕರ್ನಾಟಕ ವಿಕಾಸ, ಗ್ರಾಅಪ ಇಲಾಖೆ) ಇವರನ್ನು ಅಭಿವೃದ್ಧಿ ಆಯುಕ್ತರ ಸಿಬ್ಬಂದಿ ಶಾಖೆಯ ಶಾಖಾಧಿಕಾರಿ ಹುದ್ದೆಯಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಶ್ರೀ ಬೂವನಹಳ್ಳಿ ನಾಗರಾಜ್ ಇವರ ಮನವಿ ದಿನಾಂಕ: 8.11.2003.

2) ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ (ರೇಷ್ಮೆ) ಅ.ಟಿ. ಸಂಖ್ಯೆ: ವಾಕೈ 564 ರೇಸೇವಿ 2003, ದಿನಾಂಕ: 9.1.2004.

**ಪ್ರಸ್ತಾವನೆ:**

ಶ್ರೀ ಬೂವನಹಳ್ಳಿ ನಾಗರಾಜ್, ರೇಷ್ಮೆ ಸಹಾಯಕ ನಿರ್ದೇಶಕರು, ಇವರು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಕರ್ನಾಟಕ ವಿಕಾಸ ಮಾಸಿಕ ಪತ್ರಿಕೆ ಸಂಪಾದಕರಾಗಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಿಂದ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿದ್ದು, ಉಲ್ಲೇಖ (1) ರಲ್ಲಿ ಓದಲಾದ ಪತ್ರದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಸದರಿಯವರನ್ನು ಸಮಾನಾಂತರ ಹುದ್ದೆಗೆ ವಿಲೀನಗೊಳಿಸಲು ಕೋರಿರುತ್ತಾರೆ. ಉಲ್ಲೇಖ (2) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ, ಇವರ ಮಾತೃ ಇಲಾಖೆಯಾದ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು, ಸದರಿ ಅಧಿಕಾರಿಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ವಿಲೀನಗೊಳಿಸಲು ಸಹಮತಿ ನೀಡಿರುತ್ತಾರೆ.

ಆದ್ದರಿಂದ ಶ್ರೀ ಬೂವನಹಳ್ಳಿ ನಾಗರಾಜ್ ಇವರನ್ನು, ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ-16 (ಎ) (II) ರನ್ವಯ ಅಭಿವೃದ್ಧಿ ಆಯುಕ್ತರ ಸಿಬ್ಬಂದಿ ಶಾಖೆಯಲ್ಲಿನ ಶಾಖಾಧಿಕಾರಿ ಹುದ್ದೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾವಣೆ ಮೂಲಕ ನೇಮಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಗಿನ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 157 ಪಬವ 2003, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಬೂವನಹಳ್ಳಿ ನಾಗರಾಜ್, ರೇಷ್ಮೆ ಸಹಾಯಕ ನಿರ್ದೇಶಕರು, ಪ್ರಸ್ತುತ ಸಂಪಾದಕರು, ಕರ್ನಾಟಕ ವಿಕಾಸ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ-16 (ಎ) (II) ರನ್ವಯ ಅಭಿವೃದ್ಧಿ ಆಯುಕ್ತರ ಸಿಬ್ಬಂದಿ ಶಾಖೆಯಲ್ಲಿನ ಶಾಖಾಧಿಕಾರಿ ಹುದ್ದೆಗೆ (ವೇತನ ಶ್ರೇಣಿ ರೂ.6,000-11,200) ವರ್ಗಾವಣೆ ಮೂಲಕ ನೇಮಿಸಲಾಗಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ದಿನಾಂಕ: 22.12.2003ರ ಟಿಪ್ಪಣಿ ಸಂಖ್ಯೆ: ಸಿಆಸುಇ 2714 ಸೇನಿಎ 2003ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಷಣ್ಮುಖ**

ಪಿ.ಆರ್. 148

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀಮತಿ ಕಮಲಮ್ಮ ಸಮೂಹ 'ಎ' (ಕಿರಿಯ ಶ್ರೇಣಿ ಅಧಿಕಾರಿ) ಹಿಂದಿನ ಸಹಾಯಕ ಆಯುಕ್ತರು, ಹಿಂದೂ ಧಾರ್ಮಿಕ ದತ್ತಿ ಉಂಬಳಿ, ಮಂಗಳೂರು ಹಾಗೂ ಆಡಳಿತಾಧಿಕಾರಿಗಳು, ಕಾಟಿಪಳ್ಳ ಶ್ರೀ ಮಹಾಗಣಪತಿ ದೇವಾಲಯ ಮಂಗಳೂರು ಇವರ ಮೇಲೆ ಇಲಾಖಾ ವಿಚಾರಣೆ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಕಂಇ 12 ಮುಸೇವಿ 2002, ದಿನಾಂಕ: 21.11.2002.

2) ದಿನಾಂಕ: 17.06.2003ರ ವಿಚಾರಣಾಧಿಕಾರಿಗಳ ವಿಚಾರಣಾ ವರದಿ.

**ಪ್ರಸ್ತಾವನೆ:**

ಶ್ರೀಮತಿ ಕಮಲಮ್ಮ ಸಮೂಹ ಎ (ಕಿರಿಯ ಶ್ರೇಣಿ) ಅಧಿಕಾರಿ ಹಾಗೂ ಸಹಾಯಕ ಆಯುಕ್ತರು, ಮುಜರಾಯಿ ಕಾಮಗಾರಿಗಳು, ನಗರ ಸಭಾ ವಲಯ, ಬೆಂಗಳೂರು ಇವರು ಈ ಹಿಂದೆ ಸಹಾಯಕ ಆಯುಕ್ತರು, ಹಿಂದು ಧಾರ್ಮಿಕ ದತ್ತಿ ಉಂಬಳಿ, ಮಂಗಳೂರು ಮತ್ತು ಆಡಳಿತಾಧಿಕಾರಿಗಳು ಕಾಟಿಪಳ್ಳ ಶ್ರೀ ಮಹಾಗಣಪತಿ ದೇವಸ್ಥಾನ, ಮಂಗಳೂರು ತಾಲ್ಲೂಕು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕಾಟಿಪಳ್ಳ ಶ್ರೀ ಮಹಾಗಣಪತಿ ದೇವಳದಲ್ಲಿ ಖಾಲಿ ಇದ್ದ ಒಂದು ಆಫೀಸ್ ಕ್ಲರ್ಕ್ ಮತ್ತು ಒಂದು ಸ್ಟೋರ್ ಕೀಪರ್ ಹುದ್ದೆಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸವಾಗಿರದೇ ಇರುವ ದೂರದ ಹಾಸನ ಜಿಲ್ಲೆಯವರಾದ ತಮ್ಮ ಸ್ವಂತ ಸಂಬಂಧಿಕರನ್ನು ನೇಮಿಸಿಕೊಂಡು ಅಧಿಕಾರ ದುರುಪಯೋಗ ಪಡಿಸಿರುವುದಲ್ಲದೆ ಇಲಾಖಾ ಕಾನೂನನ್ನು ಉಲ್ಲಂಘಿಸಿ ದೇವಳದ ಹಣವನ್ನು ಹೆಚ್ಚುವರಿಯಾಗಿ ವ್ಯಹಿಸಲು ಕಾರಣರಾಗಿರುವ ಆರೋಪಗಳ ಬಗ್ಗೆ ಶ್ರೀಮತಿ ಕಮಲಮ್ಮ ಸಮೂಹ 'ಎ' ಅಧಿಕಾರಿಯವರಿಗೆ ದೋಷಾರೋಪಣಾಪಟ್ಟಿ ಜಾರಿ ಮಾಡಿ ದೋಷರೋಪಣಾ ಪಟ್ಟಿಗೆ ಸದರಿಯವರು ನೀಡಿದ ಲಿಖಿತ ಸಮಜಾಯಿಷಿ ಹೇಳಿಕೆಯನ್ನು ಪರಿಶೀಲಿಸಿ ಈ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ಇಲಾಖಾ ವಿಚಾರಣೆಯನ್ನು ನಡೆಸಲು ಸರ್ಕಾರವು ನಿರ್ಧರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಆದೇಶದಲ್ಲಿ ವಿಚಾರಣಾಧಿಕಾರಿಗಳನ್ನು ನೇಮಕ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿನಂತೆ ವಿಚಾರಣಾಧಿಕಾರಿಗಳು ಶ್ರೀಮತಿ ಕಮಲಮ್ಮ ಸಮೂಹ 'ಎ' ಅಧಿಕಾರಿ ರವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಆಪಾದಿತರ ಹೇಳಿಕೆ ಇಲಾಖಾ ಸಾಕ್ಷಿಗಳ ಹೇಳಿಕೆ ಹಾಗೂ ಮಂಡನಾಧಿಕಾರಿಯವರ ವಾದ / ಹೇಳಿಕೆಯನ್ನು ವಿಚಾರಣಾಧಿಕಾರಿಗಳು ಪರಿಶೀಲಿಸಿರುತ್ತಾರೆ. ನೇಮಕಾತಿ ಹೊಂದಿದ ನೌಕರರು ಆರೋಪಿತರ ಸಂಬಂಧಿಕರಾಗಿರುತ್ತಾರೆಂಬ ಆರೋಪದ ಬಗ್ಗೆ ಇಲಾಖಾ ಸಾಕ್ಷಿಗಳು ನೇಮಕಾತಿ ಹೊಂದಿರುವವರು ಆರೋಪಿತರ ತಂಗಿಯ ಮಕ್ಕಳೆಂದು ಸಾಕ್ಷಿ ನುಡಿದಿದ್ದು, ಸದರಿಯವರು ನೇಮಕಾತಿಗೊಂಡ ನೌಕರರೇ ಹಾಗೇ ತಿಳಿಸಿದ್ದು, ನೇಮಕಾತಿ ಹೊಂದಿದ್ದ ನೌಕರರು ಸಂಪೂರ್ಣವಾಗಿ ಆರೋಪಿತರಿಗೆ ಅವಲಂಬಿತರಾಗಿರುತ್ತಾರೆಂದು ಸಾಬೀತುಪಡಿಸಿರುವುದಿಲ್ಲವೆಂದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸವಾಗಿರದೇ ಇರುವ ದೂರದ ಹಾಸನ ಜಿಲ್ಲೆಯವರಾದ ತಮ್ಮ ಸ್ವಂತ ಸಂಬಂಧಿಕರನ್ನು ನೇಮಿಸಿಕೊಂಡಿದ್ದಾರೆಂಬ ಆರೋಪದ ಬಗ್ಗೆ, ಭಾರತ ಸಂವಿಧಾನದ 16ನೇ ಅನುಚ್ಛೇದದ 2ನೇ ಉಪ ಅನುಚ್ಛೇದದ ಪ್ರಕಾರ ಸರ್ಕಾರಿ ನೇಮಕದಲ್ಲಿ ಭಾರತೀಯ ಯಾವುದೇ ನಾಗರೀಕನನ್ನು ಅವನ ಧರ್ಮ, ಜಾತಿ ಅಥವಾ ಹುಟ್ಟಿದ ಸ್ಥಳ ಅಥವಾ ವಾಸ್ತವ್ಯದ ಆಧಾರದ ಮೇಲೆ ವಂಚನೆ ಮಾಡತಕ್ಕದ್ದಲ್ಲ. ಅಥವಾ ಒಬ್ಬನಿಗೆ ವಿಶಿಷ್ಟ ಸೌಲಭ್ಯ ಆ ಕಾರಣಕ್ಕಾಗಿ ಕೊಡತಕ್ಕದ್ದಲ್ಲವೆಂಬ ವಿಷಯವನ್ನು ವಿಚಾರಣಾಧಿಕಾರಿಗಳು ಪರಿಗಣನೆಗೆ ತೆಗೆದುಕೊಂಡಿರುತ್ತಾರೆ. ದೇವಸ್ಥಾನ ಸ್ಕೀಂನಲ್ಲಿ ಇಂತಹ ನೇಮಕಗೊಂಡ ವ್ಯಕ್ತಿಗಳ ವಾಸ್ತವ್ಯದ ಅಥವಾ ಜಿಲ್ಲೆಯವರೇ ಆಗಿರಬೇಕು ಎಂಬ ಬಗ್ಗೆ ಎಲ್ಲಾ ಕಂಡು ಬರುತ್ತಿಲ್ಲ. ಆದರೆ ದೇವಸ್ಥಾನದ ಆಡಳಿತಾಧಿಕಾರಿ ಯಾವುದೇ ನೇಮಕಾತಿಗಳನ್ನು ಸೃಷ್ಟಿಸಬಾರದೆಂದು ಇರುತ್ತದೆ. ಆರೋಪಿತರು ನೌಕರರ ಪಟ್ಟಿಯನ್ನು ತಾವೇ ಮಂಜೂರು ಮಾಡಿಕೊಂಡಿರುವುದಿಲ್ಲ. ಇವರಿಗಿಂತ ಹಿಂದಿನ ಸಹಾಯಕ ಆಯುಕ್ತರೇ ನೌಕರರ ಪಟ್ಟಿಯನ್ನು ಮಂಜೂರು ಮಾಡಿರುವುದರಿಂದ ಇಲಾಖಾ ಕಾನೂನನ್ನು ಉಲ್ಲಂಘಿಸಿ ದೇವಳದ ಹಣವನ್ನು ಹೆಚ್ಚುವರಿಯಾಗಿ ವಹಿಸಲು ಆರೋಪಿತರು ಕಾರಣರಾಗಿರುತ್ತಾರೆಂಬ ಆರೋಪವು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ.

ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಆರೋಪಗಳು ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಒಪ್ಪಿ ಆರೋಪಿತರನ್ನು ಆರೋಪದಿಂದ ಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 12 ಮುಸೇವಿ 2002, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಶ್ರೀಮತಿ ಕಮಲಮ್ಮ, ಸಹಾಯಕ ಆಯುಕ್ತರು, ಮುಜರಾಯಿ ಕಾಮಗಾರಿಗಳು, ಬೆಂಗಳೂರು ನಗರ ಸಭಾ ವಲಯ, ಬೆಂಗಳೂರು ಹಾಗೂ ಅಂದಿನ ಸಹಾಯಕ ಆಯುಕ್ತರು ಹಿಂದೂ ಧಾರ್ಮಿಕ ಮತ್ತು

ದತ್ತಿ ಉಂಬಳಿಗಳು, ಮಂಗಳೂರು ಮತ್ತು ಆಡಳಿತಾಧಿಕಾರಿಗಳು, ಕಾಟಿಪಳ್ಳ ಶ್ರೀ ಮಹಾಗಣಪತಿ ದೇವಸ್ಥಾನ, ಮಂಗಳೂರು ತಾಲ್ಲೂಕು ಇವರ ವಿರುದ್ಧ ಮಾಡಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಒಪ್ಪಿ ಆರೋಪಿತರ ಮೇಲೆ ಹೊರಿಸಲಾದ ಆರೋಪಗಳಿಂದ ಮುಕ್ತರನ್ನಾಗಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಸರೋಜ**

ಪಿ.ಆರ್. 149 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಜಿ. ಜಗದೀಶ್, ಶಿಕ್ಷಣ ಇಲಾಖೆ (ವಾಣಿಜ್ಯಶಾಸ್ತ್ರ, ಉಪನ್ಯಾಸಕರು, ಸರ್ಕಾರಿ ಮಹಾರಾಣಿ ಕಲಾ ಮತ್ತು ವಾಣಿಜ್ಯ ಕಾಲೇಜು, ಮೈಸೂರು) ಹಾಲಿ ನಿಯೋಜನೆ ಮೇಲೆ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ, ಮಂಡ್ಯ ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು, ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆಯಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ ಹುದ್ದೆಯಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಪತ್ರ ಸಂಖ್ಯೆ: ಹಿಂವನಿ:ಸಿಬ್ಬಂದಿ-1/ಸಿಆರ್-30/2003-04, ದಿನಾಂಕ: 18.09.2003.

2) ಶಿಕ್ಷಣ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 171 ಡಿಸಿಇ 2003, ದಿನಾಂಕ: 30.10.2003.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಪತ್ರದಲ್ಲಿ ನಿರ್ದೇಶಕರು, ಹಿಂದುಳಿದ ವರ್ಗಗಳ ಇಲಾಖೆ, ಬೆಂಗಳೂರು ಇವರು ಶ್ರೀ ಜಿ. ಜಗದೀಶ್, ಇವರು ಕರ್ನಾಟಕ ಲೋಕಸೇವಾ ಆಯೋಗದಿಂದ ವಾಣಿಜ್ಯಶಾಸ್ತ್ರ, ಉಪನ್ಯಾಸಕ ಹುದ್ದೆಗೆ ಆಯ್ಕೆಯಾಗಿ ದಿನಾಂಕ: 18.7.1996 ರಿಂದ ಶಿಕ್ಷಣ ಇಲಾಖೆಯಲ್ಲಿ (ಕಾಲೇಜು ಶಿಕ್ಷಣ ಇಲಾಖೆ) ವಾಣಿಜ್ಯ ಶಾಸ್ತ್ರ, ಉಪನ್ಯಾಸಕರು, ಸರ್ಕಾರಿ ಮಹಾರಾಣಿ ಕಲಾ ಮತ್ತು ವಾಣಿಜ್ಯ ಕಾಲೇಜು, ಮೈಸೂರು, ಇಲ್ಲಿ ಸೇವೆ ಸಲ್ಲಿಸುತ್ತಿದ್ದು, ಶಿಕ್ಷಣ ಇಲಾಖೆಯ ದಿನಾಂಕ: 14.03.2001ರ ಅಧಿಸೂಚನೆಯಲ್ಲಿ ಇವರು ಖಾಯಂಪೂರ್ವಾವಧಿಯಲ್ಲಿ ತೃಪ್ತಿಕರವಾಗಿ ಪೂರೈಸಿರುವರೆಂದು ಘೋಷಿಸಲಾಗಿದೆ. ಪ್ರಸ್ತುತ ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ, ಮಂಡ್ಯ ಜಿಲ್ಲೆಯಲ್ಲಿ ನಿಯೋಜನೆ ಮೇಲೆ ಕೆಲಸ ನಿರ್ವಹಿಸುತ್ತಿದ್ದಾರೆ. ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ಹುದ್ದೆಯಲ್ಲಿ ಖಾಯಂ ಆಗಿ ವಿಲೀನಗೊಳಿಸುವ ಬಗ್ಗೆ ತಮ್ಮ ಅಭಿಪ್ರಾಯವನ್ನು ನೀಡಿ, ಈ ಅಧಿಕಾರಿಯು ಶಿಕ್ಷಣ ಇಲಾಖೆಯ ಉಪನ್ಯಾಸಕರಾಗಿದ್ದು, ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನಗೊಳಿಸಿದ್ದಲ್ಲಿ, ಇಲಾಖೆಯಲ್ಲಿ ನೇರ ನೇಮಕಾತಿ ಮೂಲಕ 8 (ಎಂಟು) ಹುದ್ದೆಗಳನ್ನು ಭರ್ತಿ ಮಾಡಬೇಕೆಂದು ಈ ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿರುವುದರಿಂದ ಇವರ ಸೇವೆಯನ್ನು ವಿಲೀನಗೊಳಿಸಲು ಅವಕಾಶವಿರುವುದಿಲ್ಲ ಎಂಬುದಾಗಿ ಅಭಿಪ್ರಾಯ ನೀಡಿ, ಈ ಹಿಂದೆ 4 ಮಂದಿ ಶಿಕ್ಷಣ ಇಲಾಖೆಯ ಉಪನ್ಯಾಸಕರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನಗೊಳಿಸಿದ್ದು, ಸರ್ಕಾರದ ಈ ಕ್ರಮವನ್ನು ಇಲಾಖೆಯ ನೌಕರರು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 80829-31/99 ಸಲ್ಲಿಸಿದ್ದು, ಈ ರಿಟ್ ಅರ್ಜಿಯು ನ್ಯಾಯಾಲಯದಲ್ಲಿ ಇನ್ನೂ ಇತ್ಯರ್ಥವಾಗಿರುವುದಿಲ್ಲ ಎಂದು ತಿಳಿಸಿ, ಶ್ರೀ ಜಿ. ಜಗದೀಶ್‌ರವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನ ಗೊಳಿಸುವುದು ಸಮಂಜಸವಲ್ಲ ಎಂದು ಅಭಿಪ್ರಾಯ ನೀಡಿರುತ್ತಾರೆ.

ಮೇಲೆ (2) ರಲ್ಲಿ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ಶ್ರೀ ಜಿ. ಜಗದೀಶ್, ವಾಣಿಜ್ಯಶಾಸ್ತ್ರ, ಉಪನ್ಯಾಸಕರು, ಪ್ರಸ್ತುತ ಜಿಲ್ಲಾಧಿಕಾರಿ, ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಮಂಡ್ಯ, ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯ ಈ ಹುದ್ದೆಯ ಕಾಲಿಕ ವೇತನ ಶ್ರೇಣಿಯಲ್ಲಿ ವಿಲೀನಗೊಳ್ಳುವ ಷರತ್ತಿಗೆ ಒಳಪಟ್ಟು, ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನಗೊಳಿಸಲು ಅನುಮತಿ ನೀಡಿರುತ್ತದೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಆದುದರಿಂದ ಸರ್ಕಾರದ ಆದೇಶದ ಭಾಗದಲ್ಲಿ ವಿಧಿಸಿರುವ ನಿಬಂಧನೆಗಳಿಗೆ ಒಳಪಟ್ಟು, ಶ್ರೀ ಜಿ. ಜಗದೀಶ್, ಉಪನ್ಯಾಸಕರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ಹುದ್ದೆಯಲ್ಲಿ ವಿಲೀನಗೊಳಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 287 ಬಿಇಟಿ 2003, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2003**

ಶ್ರೀ ಜಿ. ಜಗದೀಶ್, ವಾಣಿಜ್ಯಶಾಸ್ತ್ರ, ಉಪನ್ಯಾಸಕರು, ಶಿಕ್ಷಣ ಇಲಾಖೆ (ಮಹಾರಾಣಿ ಕಲಾ ಮತ್ತು ವಾಣಿಜ್ಯ ಕಾಲೇಜು, ಮೈಸೂರು) ಇವರ ಸೇವೆಯನ್ನು ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು, ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ನೇರ ನೇಮಕಾತಿ ಹುದ್ದೆಯಲ್ಲಿ ಖಾಯಂ ಆಗಿ ವಿಲೀನಗೊಳಿಸಿ, ಸರ್ಕಾರವು ಆದೇಶಿಸಿರುತ್ತದೆ.

1. ಶ್ರೀ ಜಿ. ಜಗದೀಶ್‌ರವರ ವೇತನವನ್ನು ಹಿಂದುಳಿದ ವರ್ಗಗಳ ಇಲಾಖೆಯ ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ಹುದ್ದೆಯ ಕಾಲಿಕ ವೇತನಶ್ರೇಣಿ ರೂ.7400-13120ರ ಕನಿಷ್ಠ ವೇತನಕ್ಕೆ ನಿಗದಿಪಡಿಸಿದೆ.
2. ಇವರು ಎರಡು ವರ್ಷಗಳ ಅವಧಿಯಲ್ಲಿ ಸದರಿ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು.
3. ಇವರ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 1957ರ ನಿಯಮ 6ರ ಮೊದಲನೇ ಪರಂತುಕದ ಅನುಸಾರ ನಿಗದಿಪಡಿಸತಕ್ಕದ್ದು.

4. The proposal has been examined in detail. Hence, the following order.

**GOVERNMENT ORDER NO. DE 95 NCE 2002, BANGALORE, DATED: 5th February 2004**

In the circumstances explained in the preamble, Government are pleased to order exemption of water royalty for Small Hydro Power Projects i.e. projects with capacity up to 25.00 MW as per definition of Ministry of Non Conventional Energy Sources (MNES) in Karnataka with immediate effect. The Government Order No. DE 250 PPC 96 dated: 1.8.1997 stands modified to this effect. The other conditions of the said Government Order shall continue.

By Order and in the Name of the Governor of Karnataka,

**K.L. JAYARAM**

PR-164

Under Secretary to Government, Energy Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಎಸ್. ನಂಜುಂಡಯ್ಯ, ನಿವೃತ್ತ ಕೆಎಎಸ್ ಅಧಿಕಾರಿ, ಇವರ ವಿರುದ್ಧ ವಿಚಾರಣಾಧಿಕಾರಿಯನ್ನು ನೇಮಿಸಿದ ಆದೇಶವನ್ನು ಹಿಂದಕ್ಕೆ ಪಡೆವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 24 ಎಸ್‌ಇಎನ್ 90, ದಿನಾಂಕ: 28.08.1992.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 24 ಎಸ್‌ಇಎನ್ 90, ದಿನಾಂಕ: 30.03.1993.
3) ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: 61:97 ರಲ್ಲಿ ವಿಶೇಷ ನ್ಯಾಯಾಧೀಶರು, ಬೆಂಗಳೂರು, ಅವರ ದಿನಾಂಕ: 31.12.2001ರ ಆದೇಶ.
4) ಕ್ರಿಮಿನಲ್ ಮೇಲ್ಮನವಿ ಸಂಖ್ಯೆ: 662:2002 ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ದಿನಾಂಕ: 16.06.2003ರ ಆದೇಶ.

**ಪ್ರಸ್ತಾವನೆ:**

ಶ್ರೀ ಎಸ್. ನಂಜುಂಡಯ್ಯ, ಕೆಎಎಸ್ ಅಧಿಕಾರಿ ಅವರು ತಮ್ಮ ಆದಾಯದ ಬಲ್ಲ ಮೂಲಗಳಿಗಿಂತ ಅಪಾರ ಪ್ರಮಾಣದ ಆಸ್ತಿ ಪಾಸ್ತಿಗಳನ್ನು ಸಂಗ್ರಹಿಸಿದ ಆರೋಪಕ್ಕಾಗಿ ಲೋಕಾಯುಕ್ತ ವರದಿಯ ಮೇರೆಗೆ ಅವರ ವಿರುದ್ಧ ಮೇಲೆ (1) ರಲ್ಲಿ ಓದಲಾದ ದಿನಾಂಕ: 28.08.1992ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಬೆಂಗಳೂರು ವಿಭಾಗಾಧಿಕಾರಿಯವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ಹಾಗೂ ಅವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಲು ಮೇಲೆ (2) ರಲ್ಲಿ ಓದಲಾದ ದಿನಾಂಕ: 30.03.1993ರ ಸರ್ಕಾರಿ ಆದೇಶದಲ್ಲಿ ಲೋಕಾಯುಕ್ತಕ್ಕೆ ಅನುಮತಿ ನೀಡಲಾಯಿತು. ಶ್ರೀ ಎಸ್. ನಂಜುಂಡಯ್ಯ, ಕೆಎಎಸ್ ಅಧಿಕಾರಿ, ಅವರು ದಿನಾಂಕ: 30.06.1995 ರಂದು ವಯೋನಿವೃತ್ತಿ ಹೊಂದಿದರು. ಸದರಿಯವರ ವಿರುದ್ಧ ಹೂಡಲಾದ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: 61:97 ರಲ್ಲಿ ವಿಶೇಷ ನ್ಯಾಯಾಲಯವು ದಿನಾಂಕ: 31.12.2001 ರಂದು ಅವರನ್ನು ಖುಲಾಸೆಗೊಳಿಸಿತು. ಇದರ ವಿರುದ್ಧ ಲೋಕಾಯುಕ್ತದಿಂದ ಸಲ್ಲಿಸಲಾದ ಕ್ರಿಮಿನಲ್ ಮೇಲ್ಮನವಿ ಸಂಖ್ಯೆ: 662:2002ನ್ನು ರಾಜ್ಯ ಉಚ್ಚ ನ್ಯಾಯಾಲಯವು ದಿನಾಂಕ: 16.06.2003 ರಂದು ವಜಾ ಮಾಡಿತು. ಈ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಪ್ರಕರಣವನ್ನು ಮುಕ್ತಾಯಗೊಳಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 24 ಎಸ್‌ಇಎನ್ 90, ಬೆಂಗಳೂರು, ದಿನಾಂಕ: 5ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸನ್ನಿವೇಶಗಳಿಂದಾಗಿ ಬೆಂಗಳೂರು ವಿಭಾಗಾಧಿಕಾರಿಗಳನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಹೊರಡಿಸಲಾದ ಮೇಲೆ (1) ರಲ್ಲಿ ಓದಲಾದ ದಿನಾಂಕ: 28.08.1992ರ ಆದೇಶವನ್ನು ರದ್ದುಪಡಿಸಿದ ಸರ್ಕಾರವು ಶ್ರೀ ಎಸ್. ನಂಜುಂಡಯ್ಯ, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಪ್ರಕರಣವನ್ನು ಮುಕ್ತಾಯಗೊಳಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 165

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**DEPARTMENT OF PERSONNEL AND ADMINISTRATIVE REFORMS SECRETARIAT**

**Subject:** Shifting of one cadre post of Superintendent of Police (Intelligence) Bangalore to Mangalore-reg.

**Government Order No. DPAR 01 SPS 2003 P-1, Bangalore, Dated: 7th February 2004**

The Cadre post of Superintendent of Police (Intelligence), Bangalore held by Sri Ramesh S. Harihar IPS (KN 95) is hereby shifted to Mangalore along with the incumbent with immediate effect for period of six months or until further orders which ever is earlier.

By Order and in the name of the Governor of Karnataka,

**B. V. KUMARASWAMY**

P.R. 166

Under Secretary to Government,
Department of Personnel and Administrative Reforms (Services-I).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಆರ್.ಜೆ. ವಾಲೀಕರ್, ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ ಹಾಗೂ ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಕ್ರಮಾಂಕ: ಸಿಆಸುಇ 10 ಎಸ್‌ಇಎನ್ 2002, ದಿನಾಂಕ: 27.2.2002.

2) ಶ್ರೀ ಆರ್.ಜೆ. ವಾಲೀಕರ್, ಶ್ರೀ ಎ.ಎನ್. ಗೋವಿಂದರಾಜ್, ಶ್ರೀ ಕೆ.ಜಿ. ಜಯದೇವಪ್ಪ, ಶ್ರೀ ಬಿ.ವಿ. ವರದಾಚಾರ್ ಮತ್ತು ಶ್ರೀ ಶೈಲೇಂದ್ರ ರೆಡ್ಡಿ ಅವರುಗಳ ಉತ್ತರ ಕ್ರಮವಾಗಿ ದಿನಾಂಕ: 26.4.2002, 9.4.2002, 10.4.2002, 6.4.2002 ಮತ್ತು 5.4.2002.

**ಪ್ರಸ್ತಾವನೆ:**

ಚಿತ್ರದುರ್ಗ ಜಿಲ್ಲಾ ಪಂಚಾಯತ್, ಮುಖ್ಯ ಕಾರ್ಯ ನಿರ್ವಹಣಾ ಅಧಿಕಾರಿ ಉಪ ಕಾರ್ಯದರ್ಶಿ, ಪ್ರಭಾರ ಸಹಾಯಕ ಕಾರ್ಯದರ್ಶಿ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ವ್ಯವಸ್ಥಾಪಕ ಹಾಗೂ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಜಿಲ್ಲಾ ಪಂಚಾಯತ್ ಚಿತ್ರದುರ್ಗದಲ್ಲಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಔಷಧಿ ಖರೀದಿಸಲು ಆದೇಶ ನೀಡುವಲ್ಲಿ ಅನುಸರಿಸಬೇಕಾಗಿದ್ದ ಮಾರ್ಗಸೂಚಿಗಳನ್ನು ಅನುಸರಿಸದೇ ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 242 ಜಿಪಸ 2000, ದಿನಾಂಕ: 11.8.2000 ರಲ್ಲಿನ ಮಾರ್ಗಸೂಚಿಗಳನ್ನು ಉಲ್ಲಂಘಿಸಿ ರೂ.6,76,265-00 ಗಳ ಮೊತ್ತದ ಔಷಧಿಯನ್ನು ಖರೀದಿಸಲು ಆಡಳಿತಾತ್ಮಕ ಮಂಜೂರಾತಿ ನೀಡಿರುವ ಆರೋಪಕ್ಕಾಗಿ ಶ್ರೀ ಆರ್.ಜೆ. ವಾಲೀಕರ್, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಶ್ರೀ ಎ.ಎನ್. ಗೋವಿಂದರಾಜ್, ನಿವೃತ್ತ ಕೆಎಎಸ್ ಅಧಿಕಾರಿ, ಶ್ರೀ ವಿ. ಪಾಪಣ್ಣ, ಶ್ರೀ ಕೆ.ಜಿ. ಜಯದೇವಪ್ಪ, ನಿವೃತ್ತ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಶ್ರೀ ಬಿ.ವಿ. ವರದಾಚಾರ್ ಹಾಗೂ ಶ್ರೀ ಶೈಲೇಂದ್ರ ರೆಡ್ಡಿ ಅವರುಗಳಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 27.2.2002ರ ನೋಟೀಸ್ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸ್‌ಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 26.4.2002, 9.4.2002, 10.4.2002, 6.4.2002 ಮತ್ತು 5.4.2002ರ ಉತ್ತರ ಸಲ್ಲಿಸಿದ ಆರೋಪಿತರುಗಳು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಗಳನ್ನು ನಿರಾಕರಿಸಿರುತ್ತಾರೆ. ಆರೋಪಿತ ನೌಕರರಲ್ಲಿ ಒಬ್ಬರಾದ ಶ್ರೀ ವಿ. ಪಾಪಣ್ಣ ಅವರು ನೋಟೀಸ್‌ಗೆ ಉತ್ತರ ಸಲ್ಲಿಸಿರುವುದಿಲ್ಲ. ಆರೋಪಿತ ಅಧಿಕಾರಿಗಳ ಉತ್ತರಗಳನ್ನು ಪರಿಶೀಲಿಸಿದ ಸರ್ಕಾರವು ಅವುಗಳು ಮನಗಾಣುವ ರೀತಿಯಲ್ಲಿಲ್ಲದಿರುವುದರಿಂದ ಆರೋಪಗಳಲ್ಲಿನ ಸತ್ಯಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 10 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13 ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಆರ್.ಜೆ. ವಾಲೀಕರ್, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಮತ್ತು ಇತರರುಗಳ ವಿರುದ್ಧ ಮೇಲೆ ಹೇಳಲಾದ ಆರೋಪಗಳ ಕುರಿತು ವಿಚಾರಣೆ ಮಾಡುವ ಸಲುವಾಗಿ ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಗಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಉಪ ಕಾರ್ಯದರ್ಶಿ (ಆಡಳಿತ) ಜಿಲ್ಲಾ ಪಂಚಾಯತ್, ಚಿತ್ರದುರ್ಗ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 167

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ವಿ.ಬಿ. ಹಿರೇಗೌಡರ್, ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ - ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಕ್ರಮಾಂಕ: ಸಿಆಸುಇ 56 ಎಸ್‌ಇಎನ್ 97, ದಿನಾಂಕ: 19.10.2001.

2) ಜಿಲ್ಲಾಧಿಕಾರಿ, ಬಾಗಲಕೋಟೆ, ಅವರ ವಿಚಾರಣಾ ವರದಿ ಕ್ರಮಾಂಕ: ಆರ್‌ಬಿ:ಇಎಸ್‌ಟಿ:3:ಸಿಆರ್:31: 2001-2002, ದಿನಾಂಕ: 26.8.2002.

3) ನೋಟೀಸ್ ಕ್ರಮಾಂಕ: ಸಿಆಸುಇ 56 ಎಸ್‌ಇಎನ್ 97, ದಿನಾಂಕ: 28.1.2003.

4) ಶ್ರೀ ವಿ.ಬಿ. ಹಿರೇಗೌಡರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ಉತ್ತರ ದಿನಾಂಕ: 19.9.2002.

5) ಕಾರ್ಯದರ್ಶಿ, ಕರ್ನಾಟಕ ಲೋಕಾ ಸೇವಾ ಆಯೋಗ, ಅವರ ಪತ್ರ ಕ್ರಮಾಂಕ: ಪಿಎಸ್‌ಸಿ:36:ಸಿಎನ್‌ಎಸ್: 2003, ದಿನಾಂಕ: 20.10.2003.

**ಪ್ರಸ್ತಾವನೆ:**

ಕೃಷ್ಣ ಮೇಲ್ದಂಡೆ ಯೋಜನೆ, ಆಲಮಟ್ಟಿಯಲ್ಲಿ ಸಮೂಹ ವ್ಯವಸ್ಥಾಪಕರು ಹಾಗೂ ವಿಶೇಷ ಜಿಲ್ಲಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಭೂ ಸ್ವಾಧೀನ ಪ್ರಕರಣಗಳಲ್ಲಿ ಅಧಿಕಾರ ನಿಹಿತವಾಗಿದ್ದರೂ ಯತೋಚಿತವಾಗಿ ಅಧಿಕಾರ ಚಲಾಯಿಸಿ ಕರ್ತವ್ಯ ನಿರ್ವಹಿಸದೇ ಮತ್ತು ಕೆಲವೊಂದು ಸನ್ನಿವೇಶಗಳಲ್ಲಿ ಯೋಜನೆಯಡಿ ಬರುವ ಸಂತ್ರಸ್ಥರಿಗೆ ಪುನರ್ ವಸತಿ ಕೇಂದ್ರಗಳಲ್ಲಿ ಈಗಾಗಲೇ ವಸತಿ ಸೌಲಭ್ಯ ಕಲ್ಪಿಸಲಾಗಿದ್ದರೂ ಅದನ್ನು ಖಚಿತಪಡಿಸಿಕೊಳ್ಳದೆ ಮತ್ತೆ ಭೂಸ್ವಾಧೀನ ಪಡಿಸಿಕೊಳ್ಳಲು ಮುಂದಾಗಿ ಬೇಜವಾಬ್ದಾರಿತನದಿಂದ ವರ್ತಿಸಿದ ಹಾಗೂ ಸಂತ್ರಸ್ಥರ ಕುಟುಂಬಗಳಿಗೆ ನೀಡುವ ಅನುಕಂಪ ಪರಿಹಾರ ಧನ ವಿತರಣೆಯಲ್ಲಿ ದುರುಪಯೋಗದಿಂದ ಸರ್ಕಾರಕ್ಕೆ ಕೋಟ್ಯಾಂತರ ರೂಪಾಯಿಗಳು ನಷ್ಟವಾಗುತ್ತಿದ್ದ ಬಗ್ಗೆ ಕಾಲಕಾಲಕ್ಕೆ ಪರಿಶೀಲನೆ : ಮೇಲ್ವಿಚಾರಣೆ ಮಾಡಿ ಸರ್ಕಾರದ ಹಿತಾಸಕ್ತಿಯನ್ನು ಕಾಪಾಡಲು ವಿಫಲರಾಗಿ ಸದರಿ ಅಕೃತ್ಯದಲ್ಲಿ ಭಾಗಿಯಾಗುವ ಮೂಲಕ ಕರ್ತವ್ಯಚ್ಯುತಿ ಎಸಗಿದ ಆರೋಪಗಳಿಗಾಗಿ ಶ್ರೀ ವಿ.ಬಿ. ಹಿರೇಗೌಡರ್, ಕೆಎಎಸ್ ಅಧಿಕಾರಿ ಅವರ ವಿರುದ್ಧ ಮೇಲೆ (1) ರಲ್ಲಿ ಓದಲಾದ ದಿನಾಂಕ: 19.10.2001ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಜಿಲ್ಲಾಧಿಕಾರಿ, ಬಾಗಲಕೋಟೆ ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಯವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 26.8.2002ರ ವಿಚಾರಣಾ ವರದಿ ಸಲ್ಲಿಸಿ ಆರೋಪದ ಕುರಿತು ಈ ಮುಂದಿನಂತೆ ನಿರ್ಣಯ ನೀಡಿದರು.

ಕೃಷ್ಣ ಮೇಲ್ದಂಡೆ ಯೋಜನೆ ಆಯುಕ್ತರ ಕಛೇರಿಯಲ್ಲಿ ನಡೆದ ದಿನಾಂಕ: 18.1.1996ರ ಸಭೆಯ ನಡವಳಿಯನ್ನು ಆರೋಪಿಗೆ ಕಳುಹಿಸಿ ಹಾವರಗಿ ಪುನರ್ ವಸತಿ ಕೇಂದ್ರದಲ್ಲಿ ಆಸ್ಪತ್ರೆ ಕಟ್ಟಡ ನಿರ್ಮಾಣಕ್ಕಾಗಿ ಸರ್ಕಾರಿ ಜಮೀನು ಲಭ್ಯವಿದ್ದಲ್ಲಿ ಅದನ್ನು ಗುರುತಿಸಲು ಇಲ್ಲದಿದ್ದಲ್ಲಿ ಭೂಸ್ವಾಧೀನ ಪ್ರಕ್ರಿಯೆ ಕೈಗೊಳ್ಳಲು ನಿರ್ದೇಶನ ನೀಡಲಾಗಿದೆ. ಆದರೆ ಆರೋಪಿಯು ದಿನಾಂಕ: 27.12.1996 ರಂದು ಆಯುಕ್ತರಿಗೆ ಪತ್ರ ಬರೆದು ಅವಶ್ಯವಿರುವ ಜಮೀನನ್ನು ಭೂ ಸ್ವಾಧೀನಪಡಿಸಿಕೊಳ್ಳುವುದೇ ಅಥವಾ ಬೇಡವೇ ಎಂಬ ಕುರಿತು ಆಯುಕ್ತರಿಂದಲೇ ಸ್ಪಷ್ಟೀಕರಣ ಕೋರಿರುವುದು ದಾಖಲೆಗಳಿಂದ ಕಂಡು ಬರುತ್ತದೆ. ಒಂದನೇ ಆರೋಪ ಸಾಬೀತಾಗಿ. ಬಿಳಗಿ ತಾಲ್ಲೂಕಿನ ಯತ್ನಟ್ಟಿ ಗ್ರಾಮದ ಸಂತ್ರಸ್ಥರಿಗೆ ಈಗಾಗಲೇ ಪುನರ್ ವಸತಿ ಕಲ್ಪಿಸಲಾಗಿದ್ದರೂ ಈ ಅಂಶವನ್ನು ಪರಿಶೀಲಿಸದೇ ಅದೇ ಉದ್ದೇಶಕ್ಕಾಗಿ ಮನ್ನೀಕೇರಿಯ ಜಮೀನನ್ನು ಭೂಸ್ವಾಧೀನ ಪಡಿಸಿಕೊಳ್ಳುವ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ. ಆದ್ದರಿಂದ ಎರಡನೇ ಆರೋಪ ಸಾಬೀತಾಗಿದೆ.

ಮೇಲ್ಕಂಡ ವಿಚಾರಣಾ ವರದಿಯನ್ನು ಪರಿಶೀಲಿಸಲಾಯಿತು. ಅದನ್ನು ಪರಿಶೀಲಿಸಿ ಪರಿಗಣಿಸಿದ ಸರ್ಕಾರವು ವಿಚಾರಣಾ ವರದಿಯನ್ನು ಒಪ್ಪಿಕೊಂಡು ಸಾಬೀತಾದ ಆರೋಪಗಳ ಸಂಬಂಧ ಎಸಗಿದ ದುರ್ನಡತೆಗಾಗಿ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಮಾಹೆಯಾನ 500-00 ರೂಪಾಯಿಗಳನ್ನು ಒಂದು ವರ್ಷದ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ಏಕೆ ವಿಧಿಸಬಾರದೆಂಬುದಕ್ಕೆ ಅವರಿಗೆ ಮೇಲೆ (3) ರಲ್ಲಿ ಓದಲಾದ ದಿನಾಂಕ: 28.1.2003ರ 2ನೇ ಕಾರಣ ಕೇಳುವ ನೋಟೀಸನ್ನು ನೀಡಿ ಪ್ರತಿ ತಿಂಗಳೂ 500-00 ರೂ.ಗಳನ್ನು ಒಂದು ವರ್ಷ ಕಾಲ ಏಕೆ ಕಡಿತಗೊಳಿಸಬಾರದೆಂಬುದಕ್ಕೆ ಸಮಜಾಯಿಷಿ ಕೇಳಲಾಯಿತು. ಶ್ರೀ ವಿ.ಬಿ. ಹಿರೇಗೌಡರ್ ಅವರು ಮೇಲೆ (4) ರಲ್ಲಿ ಓದಲಾದ ದಿನಾಂಕ: 28.2.2003ರ ಉತ್ತರ ಸಲ್ಲಿಸಿ ಹಾವರಗಿ ಪುನರ್ ವಸತಿ ಕೇಂದ್ರದಲ್ಲಿ ಆಸ್ಪತ್ರೆ ಕಟ್ಟಡಕ್ಕಾಗಿ ಸ್ಥಳ ಆಯ್ಕೆ ಮಾಡಿ ಸ್ವಾಧೀನಪಡಿಸಿಕೊಂಡು ಕಬ್ಜ ಕೊಟ್ಟನಂತರ 4 ವರ್ಷ ಅವಧಿ ಗತಿಸಿದ್ದರೂ ಸದರಿ ಜಾಗೆಯಲ್ಲಿ ಆಸ್ಪತ್ರೆ ಕಟ್ಟಡ ನಿರ್ಮಿಸಿಲ್ಲ, ಅಭಿವೃದ್ಧಿಪಡಿಸಿಲ್ಲ ಅದರಲ್ಲಿ ಜಾಲಿ ಬೆಳೆದು ನಿಂತಿದೆ. ವಸ್ತು ಸ್ಥಿತಿ ಹೀಗಿದ್ದಾಗ ನನ್ನಿಂದ ಯಾವುದೇ ವಿಳಂಬವಾಗಿಲ್ಲ ಹಾಗೂ ನಿಯಮ ಉಲ್ಲಂಘಿಸಿರುವುದಿಲ್ಲ. ಮತ್ತು ಮನ್ನೀಕೆರೆ ಗ್ರಾಮವು ಮುಳುಗಡೆಯಾಗುವುದಿಲ್ಲವಾದ್ದರಿಂದ ಅವರಿಗೆ ಪುನರ್ ವಸತಿ ಕಲ್ಪಿಸುವ ಪ್ರಶ್ನೆಯೇ ಬರುವುದಿಲ್ಲ. ಯತ್ನಟ್ಟಿ ಗ್ರಾಮಕ್ಕೆ ಪರ್ಯಾಯ ಪುನರ್ ವಸತಿ ಕೇಂದ್ರ ಸ್ಥಾಪಿಸಲು ಮನ್ನೀಕೆರೆ ಗ್ರಾಮದ ಜಮೀನುಗಳ ಭೂ ಸ್ವಾಧೀನ ಕ್ರಮ ಕೈಬಿಡಲಾಗಿದೆ. ಈ ರೀತಿಯ ಕ್ರಮಗಳಿಂದಾಗಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟವಾಗಿಲ್ಲ ಅಥವಾ ಸಾರ್ವಜನಿಕ ಹಿತಾಸಕ್ತಿಗೆ ಧಕ್ಕೆ ಉಂಟಾಗಿರುವುದಿಲ್ಲ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ತಮ್ಮನ್ನು ದೋಷ ಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

ಆರೋಪಿ ನಿವೃತ್ತ ಅಧಿಕಾರಿಯ ಉತ್ತರವನ್ನು ವಿಚಾರಣಾ ವರದಿ ಹಾಗೂ ದಾಖಲೆಗಳೊಡನೆ ಪರಿಶೀಲಿಸಲಾಗಿ ಹಾವರಗಿ ಪುನರ್ ವಸತಿ ಕೇಂದ್ರದಲ್ಲಿ ಆಸ್ಪತ್ರೆ ಕಟ್ಟಡಕ್ಕಾಗಿ ಸರ್ಕಾರಿ ಜಮೀನನ್ನು ಭೂಸ್ವಾಧೀನ ಪಡಿಸಿಕೊಳ್ಳುವ ಪ್ರಕ್ರಿಯೆ ಕೈಗೊಳ್ಳಲು ನಿರ್ದೇಶನ ನೀಡಲಾಗಿದ್ದರೂ ಸಹ ಅವಶ್ಯವಿರುವ ಜಮೀನನ್ನು ಭೂ ಸ್ವಾಧೀನಪಡಿಸಿಕೊಳ್ಳದೇ ಅಥವಾ ಬೇಡವೇ ಎಂಬುವ ಕುರಿತು ಸ್ಪಷ್ಟೀಕರಣ ಕೋರಿ ವಿಳಂಬಕ್ಕೆ ದಾರಿ ಮಾಡಿಕೊಟ್ಟಿರುವುದು ಹಾಗೂ ಯತ್ನಟ್ಟಿ ಗ್ರಾಮದ ಸಂತ್ರಸ್ತರಿಗೆ ಪುನರ್‌ವಸತಿ ಕಲ್ಪಿಸಲಾಗಿದ್ದರೂ ಅದನ್ನು ಪರಿಶೀಲಿಸದೆ ಮನ್ನಿಕೇರಿಯ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳುವ ಪ್ರಸ್ತಾವನೆ ಸಲ್ಲಿಸುವ ಮೂಲಕ ಆರೋಪಿತರು ತೀವ್ರ ತರವಾದ ಉದಾಸೀನತೆಯಿಂದ ವರ್ತಿಸಿರುವುದು ಕಂಡು ಬರುತ್ತದೆ. ವಿಚಾರಣಾ ವರದಿಯಲ್ಲಿನ ಆರೋಪಗಳಿಗೆ ತಕ್ಕ ಸಮಧಾನವನ್ನು ಆರೋಪಿಯು ನೀಡಿರುವುದಿಲ್ಲ. ವಿಚಾರಣಾ ವರದಿಯು ತಿಳಿಸುವಂತೆ ಇವುಗಳು ಸಾಬೀತಾದ ಆರೋಪಗಳಾಗಿಯೇ ಉಳಿದಿವೆ. ಅವರು ಎಸಗಿರುವ ದುರ್ನಡತೆ ಅಳಿಸಿ ಹೋಗುವುದಿಲ್ಲವಾದ್ದರಿಂದ ಶ್ರೀ ವಿ.ಬಿ. ಹಿರೇಗೌಡರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ಉತ್ತರವನ್ನು ಒಪ್ಪದೆ ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಕರ್ನಾಟಕ ಲೋಕ ಸೇವಾ ಆಯೋಗದೊಡನೆ ಸಮಾಲೋಚಿಸಿದ ನಂತರ ಆರೋಪಿ ನಿವೃತ್ತ ಅಧಿಕಾರಿಯ ಮಾಸಿಕ ವಿಶ್ರಾಂತಿ ವೇತನದಿಂದ 250-00 ರೂ.ಗಳನ್ನು ನಾಲ್ಕು ತಿಂಗಳ ಕಾಲ ಕಡಿತಗೊಳಿಸುವ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 56 ಎಸ್‌ಇಎನ್ 97, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2003**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ವಿ.ಬಿ. ಹಿರೇಗೌಡರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಮಾಹೆಯಾನ 250-00 ರೂಪಾಯಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ನಾಲ್ಕು ತಿಂಗಳ ಅವಧಿಗೆ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 168 ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಸೇವೆಗಳು-3).

ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ರಾಜ್ಯದಲ್ಲಿ ಅಂತರ್ಜಲವನ್ನು ಅತ್ಯುತ್ತಮ ರೀತಿಯಲ್ಲಿ ವಿನಿಯೋಗಿಸಲು ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶದ ಸಂಖ್ಯೆ:ಸನೀಇ 40 ಅಜಅ 2002, ದಿನಾಂಕ:20/6/2002.

**ಪ್ರಸ್ತಾವನೆ:**

ಪಟ್ಟಣ ಪ್ರದೇಶಗಳಲ್ಲಿ ಚರಂಡಿ ಹಾಗೂ ಕಾರ್ಮಿಕ ತ್ಯಾಜ್ಯಗಳ ನೀರಿನಿಂದ ಅಂತರ್ಜಲವು ಕಲುಷಿತ ಗೊಳ್ಳುತ್ತಿರುವುದನ್ನು ಹಾಗೂ ಅಂತರ್ಜಲದ ಹೆಚ್ಚಿನ ಬಳಕೆಯನ್ನು ನಿಯಂತ್ರಿಸಲು ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳ (ಕೆಡಿಪಿ) ಸಭೆಯಲ್ಲಿ ಚರ್ಚಿಸಿ, ರಾಜ್ಯದಲ್ಲಿರುವ ಅಂತರ್ಜಲವನ್ನು ವೈಜ್ಞಾನಿಕ ರೀತಿಯಲ್ಲಿ ವಿನಿಯೋಗಿಸಲು ಅಂತರ್ಜಲದ ಲಭ್ಯತೆ, ಬಳಕೆ ನೀರಿನ ಶುದ್ಧೀಕರಣ, ನೀರಿನ ಗುಣ ಮಟ್ಟದ ನಿರ್ವಹಣೆ, ಮರುಬಳಕೆ, ಮೇಲ್ಛಾವಣೆ ನೀರು ಸಂಗ್ರಹಣೆ, ಅದರ ಸದ್ಬಳಕೆ ಅಂತರ್ಜಲ ಮರುಪೂರೈಕೆ ಮಾಡುವುದು ಹಾಗೂ ಅಂತರ್ಜಲದ ದುರ್ಬಳಕೆಯ ನಿಯಂತ್ರಣ ಇತ್ಯಾದಿ ಕಾರ್ಯಗಳನ್ನು ರೂಪಿಸಿ, ಸಲಹೆ ಮತ್ತು ಸೂಚನೆ ನೀಡಲು ರಾಜ್ಯಮಟ್ಟದಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರವರ ಅಧ್ಯಕ್ಷತೆಯಲ್ಲಿ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯ ಮಟ್ಟದ ಅಂತರ್ಜಲ ಅಭಿವೃದ್ಧಿ ಸಮಿತಿಯನ್ನು ರಚಿಸಲಾಗಿರುತ್ತದೆ.

ರಾಜ್ಯಮಟ್ಟದ ಅಂತರ್ಜಲ ಅಭಿವೃದ್ಧಿ ಸಮಿತಿಯ ದಿನಾಂಕ:21/7/2003ರಂದು ನಡೆದ ಸಭೆಯಲ್ಲಿ ಈ ಕೆಳಕಂಡ ಅಂಶಗಳನ್ನು ಚರ್ಚಿಸಿದೆ:

1. ನೀರು ಎಲ್ಲಾ ಜೀವಿಗಳಿಗೆ ಜೀವನಾಧಾರವಾಗಿರುವುದಲ್ಲದೆ ಪ್ರಕೃತಿಯ ಅತ್ಯಮೂಲ್ಯ ಕೊಡುಗೆಯಾಗಿದೆ. ಮೋಡಗಳಲ್ಲಿ ನೀರು ಆವಿ ರೂಪದಲ್ಲಿರುತ್ತದೆ. ಭೂಮಿಯ ಮೇಲೆ ನೀರು ನದಿಗಳು, ಝರಿಗಳು ಮತ್ತು ಸಮುದ್ರಗಳು ಹಾಗೂ ಭೂಮಿಯ ಅಂತರ್ಜಲ ರೂಪದಲ್ಲಿ ಇರುತ್ತದೆ. ಅಂತರ್ಜಲವು ಭೂತಾಯಿಯ ಕೊಡುಗೆಯಾಗಿದ್ದು, ಭೂಮಿಯ ಹೊರಪದರದಿಂದ ಸ್ವಾಭಾವಿಕ ಶೋಭಿಸುವಿಕೆಯ ನಂತರ ರಕ್ಷಿಸಿಟ್ಟಿರುವ ಅಮೂಲ್ಯ ಜಲವಾಗಿದೆ. ಈ ಜಲರಾಶಿಯನ್ನು ಸಾವಿರಾರು ವರ್ಷಗಳಿಂದ ಸಂಗ್ರಹಿಸಿ ಸಂರಕ್ಷಿಸಲಾಗಿದೆ. ಅಂತರ್ಜಲ ಸ್ವಾಭಾವಿಕವಾಗಿ ನೀರಿನ ಚಿಲುಮೆ, ನೀರಿನ ಬುಗ್ಗೆ, ನೈಸರ್ಗಿಕ ಹೊಳೆ ಇತ್ಯಾದಿಗಳ ರೂಪದಲ್ಲಿದ್ದು ಮುಕ್ತ ಬಾವಿಗಳನ್ನು ತೋಡುವ ಮೂಲಕ ಅಗತ್ಯವಾದಾಗ ಪಡೆಯಬಹುದಾಗಿದೆ. ಯಾಂತ್ರೀಕೃತ ಕೊರೆಯಂತ್ರಗಳು ಆವಿಷ್ಕಾರವಾದ ನಂತರ ಅಂತರ್ಜಲವನ್ನು ಈಗ ಕೊಳವೆ ಬಾವಿಗಳ ಮೂಲಕ ಹೊರತೆಗೆಯಲಾಗುತ್ತಿದೆ. ಕರ್ನಾಟಕದಲ್ಲಿ ಅಂತರ್ಜಲವನ್ನು ಕುಡಿಯುವುದಕ್ಕಾಗಿ ಮತ್ತು ಪ್ರಮುಖವಾಗಿ ನೀರಾವರಿಗೆ ಬಳಸಲಾಗುತ್ತಿದೆ.

2. ಕರ್ನಾಟಕವು 192000 ಚ.ಕಿ.ಮೀ.ಭೌಗೋಳಿಕ ಪ್ರದೇಶವನ್ನು ಹೊಂದಿದೆ. ಇದರಲ್ಲಿ (1) 103810 ಚ.ಕಿ.ಮೀ. ಸಾಗುವಳಿ ಪ್ರದೇಶ (ಶೇ.54) (2) ಸುಮಾರು 30755 ಚ.ಕಿ.ಮೀ.ಅರಣ್ಯ ಪ್ರದೇಶ (3) 20306 ಚ.ಕಿ.ಮೀ. ಸಾಗುವಳಿಗೆ ಲಭ್ಯವಿಲ್ಲದ ಪ್ರದೇಶ (4) 18184 ಚ.ಕಿ.ಮೀ. ಸಾಗುವಳಿಯಾಗಬಹುದಾದ ಬಂಜರು, ಹುಲ್ಲುಗಾವಲು ಮತ್ತು ತೋಪುಗಳ ಪ್ರದೇಶ (5) ಸುಮಾರು 17056 ಚ.ಕಿ.ಮೀ.ಬಂಜರು ಭೂಮಿಯನ್ನು ಹೊಂದಿದೆ. ಒಟ್ಟು ಸಾಗುವಳಿ ಪ್ರದೇಶದ ಪೈಕಿ ಬಾವಿ ನೀರಾವರಿ ಪ್ರದೇಶವು ಸುಮಾರು 10000 ರಿಂದ 12000 ಚ.ಕಿ.ಮೀ. ಇರುತ್ತದೆ.

3. ರಾಜ್ಯದಲ್ಲಿ ಮಳೆ ಬರುವುದು ಅತ್ಯಂತ ಅನಿಯತವಾಗಿದೆ. ವಾರ್ಷಿಕ ಸಾಮಾನ್ಯ ಮಳೆಯು 55 ಮಳೆಗಾಲದ ದಿನಗಳಲ್ಲಿ 1138 ಮಿ.ಮೀ.ಆಗಿರುತ್ತದೆ. ಇದು ಪೂರ್ವಭಾಗದಲ್ಲಿ ಅತಿ ಕಡಿಮೆಯಾಗಿ ಕೇವಲ 569 ಮಿ.ಮೀ.ರಷ್ಟಿದ್ದು, ಪಶ್ಚಿಮದಲ್ಲಿ ಅತಿ ಹೆಚ್ಚು ಎಂದರೆ 4029 ಮಿ.ಮೀ.ವರೆಗೆ ಇರುತ್ತದೆ. ರಾಜ್ಯದ ಭೌಗೋಳಿಕ ಪ್ರದೇಶದ ಸುಮಾರು 2/3ರಷ್ಟು ಪ್ರದೇಶವು 750 ಮಿ.ಮೀ.ಗಿಂತ ಕಡಿಮೆ ವಾರ್ಷಿಕ ಮಳೆಯನ್ನು ಪಡೆಯುತ್ತದೆ. ದಕ್ಷಿಣ ಕನ್ನಡ, ಉತ್ತರ ಕನ್ನಡ ಮತ್ತು ಕೊಡಗು ಜಿಲ್ಲೆಗಳಿಗಿಂತ ರಾಜ್ಯದ ಮಳೆ ಬೀಳುವ ಭರವಸೆಯ ಪ್ರದೇಶಗಳಲ್ಲೂ ಆಗಿದ್ದರೂ ಸಹಾ ಕೆಲವು ತಿಂಗಳು/ವರ್ಷಗಳಲ್ಲಿ ಅಲ್ಲಿಯೂ ನೀರಿನ ಅಭಾವವುಂಟಾಗಿರುತ್ತದೆ.

4. ರಾಜ್ಯದಲ್ಲಿ ಭೂ ಮೇಲ್ಮೈ ಜಲಸಂಪನ್ಮೂಲ ಕೂಡ ಅಸಮರ್ಪಕವಾಗಿದೆ. ಇದೂ ಕೂಡ ಮಳೆಯನ್ನೇ ಅವಲಂಭಿಸಿರುವುದರಿಂದ ಈ ಜಲಸಂಪನ್ಮೂಲದ ಬಗ್ಗೆ ಭರವಸೆ ಇರುವುದಿಲ್ಲ. ಭಾರಿ ನೀರಾವರಿ ಯೋಜನೆಗಳು ಸಹಾ ಗುಲ್ಬರ್ಗಾ, ಬಿಜಾಪುರ, ರಾಯಚೂರು, ಬಳ್ಳಾರಿ, ಮೈಸೂರು ಮತ್ತು ಮಂಡ್ಯ ಜಿಲ್ಲೆಗಳ ಕೆಲವು ಭಾಗಗಳು ಮಾತ್ರ ಒಳಗೊಂಡಿರುತ್ತವೆ. ಇದರ ಪರಿಣಾಮವಾಗಿ ನೀರಾವರಿ, ಕುಡಿಯುವ ನೀರು ಮತ್ತು ಕೈಗಾರಿಕಾ ಉದ್ದೇಶಗಳಿಗಾಗಿ ಅಂತರ್ಜಲದ ಬಳಕೆ ಹಲವು ಪಟ್ಟು ಹೆಚ್ಚಾಗಿರುತ್ತದೆ. ಹಲವಾರು ಜಿಲ್ಲೆಗಳಲ್ಲಿ ಅಂತರ್ಜಲ ಸಂಗ್ರಹಣೆಯಲ್ಲಿನ ಅಭಿವೃದ್ಧಿಯಿಂದಾಗಿ ಅನೇಕ ತೀವ್ರ ಪರಿಸ್ಥಿತಿಗಳುಂಟಾಗಿದ್ದು ಅಂತರ್ಜಲಮಟ್ಟ ಕಡಿಮೆ ಯಾಗುತ್ತಿರುವುದು, ನೀರು ಸರಬರಾಜು ಕೊರತೆ ಮುಂತಾದ ಸಮಸ್ಯೆಗಳು ಎದುರಾಗುತ್ತಿವೆ. ಈ ಪರಿಸ್ಥಿತಿಯು ರಾಜ್ಯದ ಸಂಕಷ್ಟಪೀಡಿತ ಪ್ರದೇಶಗಳಲ್ಲಿ ಬಲವಾದ ವೈಜ್ಞಾನಿಕ ವಿಧಾನಗಳಲ್ಲಿ ಅಂತರ್ಜಲ ಸಂಪನ್ಮೂಲಗಳನ್ನು ಹೆಚ್ಚಿಸುವ ಕಾರ್ಯಕ್ರಮವನ್ನು ಪ್ರಾರಂಭಿಸಬೇಕೆಂಬುದನ್ನು ಸೂಚಿಸುತ್ತವೆ.

5. 2001ರ ಜನಗಣತಿಯ ಪ್ರಕಾರ ರಾಜ್ಯದ ಒಟ್ಟು ಜನಸಂಖ್ಯೆ ಸುಮಾರು 5.27 ಕೋಟಿ. ಈ ಪೈಕಿ ನಗರ ಜನಸಂಖ್ಯೆ ಸುಮಾರು 1.8 ಕೋಟಿ (ಶೇ.34) ಮತ್ತು ಗ್ರಾಮೀಣ ಜನಸಂಖ್ಯೆ ಸುಮಾರು 3.47 ಕೋಟಿ (ಶೇ.66) ಇಡೀ ಗ್ರಾಮೀಣ ಜನಸಂಖ್ಯೆ ಮತ್ತು ನಗರ ಜನಸಂಖ್ಯೆಯ ಕೆಲವು ಭಾಗವು ಅವರ ಗೃಹೋಪಯೋಗಿ ನೀರಿನ

ಅಗತ್ಯತೆಗಳಿಗೆ ಅಂತರ್ಜಲವನ್ನೇ ಅವಲಂಭಿಸಿರುತ್ತಾರೆ. ಗೃಹೋಪಯೋಗಿ ನೀರಿನ ಅಗತ್ಯತೆಗಳಿಗಾಗಿ ಅಂತರ್ಜಲವನ್ನು ಅವಲಂಭಿಸಿರುವ ಗ್ರಾಮೀಣ ಮತ್ತು ನಗರ ಜನಸಂಖ್ಯೆ ಸುಮಾರು 4.2 ಕೋಟಿಯಷ್ಟಿದೆ. ಈ ಜನಸಂಖ್ಯೆಯ ಗೃಹೋಪಯೋಗಿ ನೀರಿನ ಅಗತ್ಯತೆ 50 ಎಲ್‌ಪಿಸಿಡಿ ಯಲ್ಲಿ ಸುಮಾರು 766 ದಶಲಕ್ಷ ಘನಮೀಟರ್ ಆಗುತ್ತದೆ. ಈ ಪರಿಮಾಣವು ರಾಜ್ಯದಲ್ಲಿ ಲಭ್ಯವಿರುವ ಒಟ್ಟು ಅಂತರ್ಜಲ ಸಂಪನ್ಮೂಲದ ಶೇ.5.57ರಷ್ಟಾಗುತ್ತದೆಂದು ಲೆಕ್ಕ ಹಾಕಲಾಗಿದೆ.

6. ರಾಜ್ಯದಾದ್ಯಂತ ಅಂತರ್ಜಲವನ್ನು ಸಮಾನವಾಗಿ ಉಪಯೋಗವಾಗುವಂತೆ ಪಡೆಯಲಾಗಿಲ್ಲ. ಉತ್ತರ, ದಕ್ಷಿಣ ಕರ್ನಾಟಕದ ಒಳಪ್ರದೇಶ ಒಣ ತಾಲ್ಲೂಕುಗಳಲ್ಲಿ ಅಂತರ್ಜಲದ ಉಪಯೋಗವು ರಾಜ್ಯದ ತೀರಪ್ರದೇಶ, ಮಲೆನಾಡು ಮತ್ತು ನೀರಾವರಿ ಅಚ್ಚುಕಟ್ಟು ಪ್ರದೇಶಗಳಿಗೆ ಹೋಲಿಸಿದಾಗ ಅತ್ಯಂತ ಹೆಚ್ಚಾಗಿರುತ್ತದೆ. ಇದರ ಪರಿಣಾಮವಾಗಿ ರಾಜ್ಯದ ಸುಮಾರು 43 ತಾಲ್ಲೂಕುಗಳಲ್ಲಿ ಅಂತರ್ಜಲ ಸಂಪನ್ಮೂಲಗಳ ಉಪಯೋಗ ಅತಿಯಾಗಿರುತ್ತದೆ. ಇದಕ್ಕೆ ಪೂರಕವಾಗಿ ಅಂತರ್ಜಲದ ಉಪಯೋಗವು ರಾಜ್ಯದ 29 ತಾಲ್ಲೂಕುಗಳಲ್ಲಿ ಲಭ್ಯವಿರುವ ಅಂತರ್ಜಲ ಸಂಪನ್ಮೂಲಗಳ ಶೇ.50ರಷ್ಟನ್ನು ಮೀರಿರುತ್ತದೆ. ಅಂತರ್ಜಲ ಉಪಯೋಗದ ದೃಷ್ಟಿಯಿಂದ ಮೇಲಿನ ಎಲ್ಲಾ 72 ತಾಲ್ಲೂಕುಗಳೂ ಸಂಕಷ್ಟಸ್ಥಿತಿಯಲ್ಲಿರುವ ತಾಲ್ಲೂಕುಗಳಾಗಿರುತ್ತವೆ. ಈ ತಾಲ್ಲೂಕುಗಳಲ್ಲಿ 4 ಲಕ್ಷಕ್ಕೂ ಮೀರಿ ನೀರಾವರಿ ಬಾವಿಗಳಿದ್ದು, ಅವುಗಳಿಂದ 7.5ಲಕ್ಷ ಹೆಕ್ಟೇರ್ ಪ್ರದೇಶವನ್ನು ನೀರಾವರಿಗೆ ಒಳಪಡಿಸಲಾಗಿದೆ. ಅಂತರ್ಜಲ ಸಂಪನ್ಮೂಲಗಳ ಅತಿಯಾದ ಬಳಕೆಯಿಂದಾಗಿ 3 ಲಕ್ಷಕ್ಕೂ ಹೆಚ್ಚು ತೋಡುಬಾವಿಗಳು ಒಣಗಿವೆ ಮತ್ತು ಆಳವಿಲ್ಲದ ಕೊಳವೆ ಬಾವಿಗಳೂ ಸಹಾ ವಿಫಲವಾಗಿವೆ. ಆಳವಾದ ಕೊಳವೆ ಬಾವಿಗಳಿಂದಾಗಿ ಇಳುವರಿ ಸಹಾ ಕಡಿಮೆಯಾಗುತ್ತಿದೆ. ಇದರಿಂದಾಗಿ, ಅಂತರ್ಜಲ ಸಂಪನ್ಮೂಲಗಳಿಂದ ನೀರಾವರಿಯಾಗುತ್ತಿರುವ ಪ್ರದೇಶ ಕಡಿಮೆ ಯಾಗುತ್ತಿದೆ. ತತ್ಪರಿಣಾಮವಾಗಿ ಬಾವಿಗಳ ನಿರ್ಮಾಣ, ಪಂಪಿಂಗ್ ಉಪಕರಣಗಳು, ಕೊಳವೆ ದಾರಿ ಮಾರ್ಗ (ಪೈಪ್ ಲೈನ್) ಅಭಿವೃದ್ಧಿ ಇತ್ಯಾದಿಗಳಿಗಾಗಿ ರೈತರು ತೊಡಗಿಸಿದ್ದ 2000 ಕೋಟಿ ರೂಪಾಯಿಗಳಿಗೂ ಮೀರಿದ ಬಂಡವಾಳ ನಿಷ್ಫಲವಾಗಿದೆ. ಸದರಿ ವಿಷಯದ ಬಗ್ಗೆ ಸಭೆಯಲ್ಲಿ ಭಾಗವಹಿಸಿದ ಈ ಕೆಳಕಂಡ ಇಲಾಖೆಗಳ ಪ್ರತಿನಿಧಿಗಳ ಸಲಹೆಗಳನ್ನು ಕೂಡಾ ಪಡೆಯಲಾಗಿತ್ತು:

1. ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ
2. ಕೇಂದ್ರೀಯ ಅಂತರ್ಜಲ ಮಂಡಳಿ
3. ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ
4. ಬೆಂಗಳೂರು ಜಲಮಂಡಳಿ
5. ಗಣಿ ಮತ್ತು ಭೂವಿಜ್ಞಾನ ಇಲಾಖೆ
6. ಸಣ್ಣ ನೀರಾವರಿ ಇಲಾಖೆ
7. ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ವಿಭಾಗ
8. ಬರಪರಿಹಾರ ಮತ್ತು ಉಸ್ತುವಾರಿ ಕೋಶ

ಸಮಿತಿಯ ಚರ್ಚೆಯ ಸಮಯದಲ್ಲಿ ಮೇಲ್ಕಂಡ ಅಂಶಗಳನ್ನು ಹಾಗೂ ಸದಸ್ಯರು ನೀಡಿರುವ ಸಲಹೆ/ಅಭಿಪ್ರಾಯಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಅವುಗಳ ಬಗ್ಗೆ ಸರ್ಕಾರಕ್ಕೆ ಸೂಕ್ತ ಕ್ರಮ ತೆಗೆದುಕೊಳ್ಳಲು ಶಿಫಾರಸ್ಸು ಮಾಡಲಾಗಿತ್ತು. ಸಮಿತಿಯ ಸಲಹೆ ಮತ್ತು ಶಿಫಾರಸ್ಸುಗಳನ್ನು ಸರ್ಕಾರದ ಸಚಿವ ಸಂಪುಟದ ಮುಂದೆ ಮಂಡಿಸಿ ಸಚಿವ ಸಂಪುಟದ ಅನುಮೋದನೆ ಪಡೆಯಲಾಗಿದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 04 ಅಜಅ 2003 ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಅಂತರ್ಜಲವನ್ನು ಅತ್ಯುತ್ತಮ ರೀತಿಯಲ್ಲಿ ವಿನಿಯೋಗಿಸಲು ಸಂಬಂಧಪಟ್ಟ ಇಲಾಖೆಗಳು ಈ ಕೆಳಕಂಡಂತೆ ಯೋಜನೆಗಳನ್ನು ಕಾರ್ಯಗತಗೊಳಿಸಲು ಸರ್ಕಾರದ ಅನುಮೋದನೆ ನೀಡಿದೆ:

1) ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ವಿಶೇಷ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವ ಮೂಲಕ ಬ್ಯಾರೇಜುಗಳನ್ನು, ಚೆಕ್ ಡ್ಯಾಂಗಳನ್ನು, ಅಣೆಕಟ್ಟುಗಳನ್ನು ಹಾಗೂ ಪಿಕಪ್‌ಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಾಣ ಮಾಡುವುದು.
2) ಪ್ರತಿಯೊಂದು ಗ್ರಾಮ ಮತ್ತು ಪಟ್ಟಣದ ಸಮೀಪ ಈಗಿರುವ ಕೆರೆಗಳನ್ನು ಪುನರುಜ್ಜೀವನಗೊಳಿಸಿ ಅದರ ಸಾಮರ್ಥ್ಯವನ್ನು ಹೆಚ್ಚಿಸುವುದು ಮತ್ತು ಕೆರೆಗಳಲ್ಲಿ ಸಂಗ್ರಹವಾದ ನೀರನ್ನು ಆದ್ಯತೆ ಮೇಲೆ ಕುಡಿಯುವ ನೀರಿಗಾಗಿ ಉಪಯೋಗಿಸಿಕೊಳ್ಳುವುದು.
3) ರಾಜ್ಯದಲ್ಲಿ ದೂರ ಸಂವೇದಿ ತಂತ್ರಜ್ಞಾನ ಮತ್ತು ಭೂ ಭೌತ ವಿಜ್ಞಾನ ಅಧ್ಯಯನಗಳನ್ನು ಆಧರಿಸಿ ಅಂತರ್ಜಲ ಮರುಪೂರೈಕೆ ರಚನೆಗಳಾದ ಚೆಕ್ ಡ್ಯಾಂ, ನಾಲಾ ಬಂಡ್, ಸಬ್ ಸರ್ಫೇಸ್ ಡೈಕ್, ಪರ್ಕೊಲೇಶನ್ ಬಂಡ್, ಇಂಗು ಬಾವಿ ಮುಂತಾದ ರಚನೆಗಳ ನಿರ್ಮಾಣಕ್ಕಾಗಿ ಸ್ಥಳಗಳನ್ನು ಆಯ್ಕೆ ಮಾಡುವುದು. ಆಯ್ಕೆ ಮಾಡಿದ ಸ್ಥಳಗಳಲ್ಲಿ ಅಂತರ್ಜಲ ಹೆಚ್ಚಿಸುವುದಕ್ಕೆ ಸಂಬಂಧಪಟ್ಟ ಇಲಾಖೆಗಳು

ಅಂದರೆ, ಕೃಷಿ, ಗಣಿ ಮತ್ತು ಭೂವಿಜ್ಞಾನ, ಸಣ್ಣ ನೀರಾವರಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್, ಜಲಾನಯನ ಅಭಿವೃದ್ಧಿ, ಭಾರಿ ನೀರಾವರಿ, ಅರಣ್ಯ ಇಲಾಖೆಗಳು ಸೂಕ್ತ ರಚನೆಗಳನ್ನು ನಿರ್ಮಾಣ ಮಾಡುವುದು.

4) ಬರಗಾಲ ಸಮಯದಲ್ಲಿ ಕುಡಿಯುವ ನೀರಿಗೆ ಕ್ಲಿಷ್ಟ ಪರಿಸ್ಥಿತಿ ಕಂಡುಬಂದಲ್ಲಿ ಕೆಲವು ಕೆರೆಗಳ ತೂಬುಗಳನ್ನು ಮುಚ್ಚಿ ನೀರನ್ನು ವ್ಯವಸಾಯಕ್ಕೆ ಬಿಡದೆ ಇದ್ದಲ್ಲಿ ಜನ ಜಾನವಾರುಗಳಿಗೆ ಕುಡಿಯುವ ನೀರಿಗೆ ಅನುಕೂಲವಾಗುವುದರಿಂದ ಹಾಗೂ ಹೆಚ್ಚಿನ ಕಾಲ ನೀರು ನಿಲ್ಲುವುದರಿಂದ ಸುತ್ತಮುತ್ತಲ ಅಂತರ್ಜಲ ಮಟ್ಟವನ್ನು ಹೆಚ್ಚಿಸಲು ಸಾಧ್ಯವಿದೆ. ಅಲ್ಲದೆ ಜನ ಜಾನುವಾರುಗಳಿಗೆ ಕುಡಿಯುವ ನೀರಿಗೆ ಅನುಕೂಲವಾಗುತ್ತದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಸಚಿವ ಸಂಪುಟದ ಅನುಮೋದನೆ ಪಡೆದು ಅಗತ್ಯ ಕ್ರಮ ಕೈಗೊಳ್ಳುವುದು.

5) ನಗರಾಭಿವೃದ್ಧಿ ಇಲಾಖೆಗೆ ಈ ಕೆಳಕಂಡ ಅಂಶಗಳನ್ನು ಅನುಷ್ಠಾನಗೊಳಿಸಲು ಈ ಮೂಲಕ ನಿರ್ದೇಶನ ನೀಡಿದೆ:
   (1) ಒಳಚರಂಡಿ ನೀರನ್ನು ಸಂಸ್ಕರಿಸಿ, ಕುಡಿಯುವುದಕ್ಕೆ ಹೊರತುಪಡಿಸಿ, ಬೇರೆ ಬಳಕೆಗೆ ಉಪಯೋಗಿಸಿಕೊಳ್ಳುವುದು.
   (2) ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ಹೊಸದಾಗಿ ನಿರ್ಮಿಸುವ ಮನೆಗಳಿಗೆ ಅನುಮತಿ ನೀಡುವ ಸಮಯದಲ್ಲಿ ಮಳೆ ನೀರಿನ ಸಂಗ್ರಹಣೆ ಮಾಡುವ ರಚನೆಗಳನ್ನು ಕಡ್ಡಾಯವಾಗಿ ನಕ್ಷೆಯಲ್ಲಿ ಸೇರಿಸಿ ಅನುಷ್ಠಾನಗೊಳಿಸುವುದು.
   (3) ಒಳಚರಂಡಿ ನೀರನ್ನು (ಕಲುಷಿತ ನೀರನ್ನು) ಯಾವುದೇ ಕೆರೆಗಳಿಗೆ ಬಿಡಬಾರದು. ಸಂಸ್ಕರಣಾ ಘಟಕಗಳನ್ನು ರಚಿಸಿ ನೀರನ್ನು ಶುದ್ಧೀಕರಿಸಿ ಬಳಕೆ ಮಾಡಲು ಕ್ರಮ ತೆಗೆದುಕೊಳ್ಳುವುದು.

6) ರಾಜ್ಯದಲ್ಲಿ ಅಂತರ್ಜಲವನ್ನು ಅಭಿವೃದ್ಧಿಪಡಿಸುವ ಬಗ್ಗೆ ಜನ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಜಲಸಂಪನ್ಮೂಲ ನಿರ್ವಹಿಸುವ ಎಲ್ಲಾ ಇಲಾಖೆಗಳಿಗೆ ಸೂಚನೆ ನೀಡಿದೆ ಮತ್ತು ರಾಜ್ಯದಲ್ಲಿ ಈ ವಿಷಯದ ಬಗ್ಗೆ ವಿಚಾರಗೋಷ್ಟಿಗಳು, ಕಾರ್ಯಾಗಾರಗಳನ್ನು ನಡೆಸುವುದು.

7) ಸಂಬಂಧಪಟ್ಟ ಇಲಾಖೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ತಾಂತ್ರಿಕ ಮತ್ತು ಇತರ ಸಿಬ್ಬಂದಿಗಳಿಗೆ ಅಂತರ್ಜಲವನ್ನು ಹೆಚ್ಚಿಸುವ ಮತ್ತು ಮೇಲ್ಮೈ ಜಲವನ್ನು ವ್ಯವಸ್ಥಿತವಾಗಿ ಉಪಯೋಗಿಸುವ ಬಗ್ಗೆ ಸೂಕ್ತ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ.ಗೋವಿಂದರಾಜ್**

ಪಿ.ಆರ್. 169

ವಿಶೇಷ ಕರ್ತವ್ಯಾಧಿಕಾರಿ

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ).

## ಕಂದಾಯ ಸಚಿವಾಲಯ

**ವಿಷಯ:** ಉತ್ತರ ಕನ್ನಡ ಜಿಲ್ಲೆಯ ಗೌಡ ಸಾರಸ್ವತ ಬ್ರಾಹ್ಮಣರ ಸಮಾಜಕ್ಕೆ ಸೇರಿದ ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003, ದಿನಾಂಕ: 30.04.2003.

2) ಧಾರ್ಮಿಕ ದತ್ತಿ ಆಯುಕ್ತರ ರವರ ಪತ್ರ ಸಂಖ್ಯೆ: ಏಕರೂಪಶಾಸನ/ಸಿಆರ್/125/2001-2002, ದಿನಾಂಕ: 25.11.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34,245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ. ಓದಲಾದ ಕ್ರಮ ಸಂಖ್ಯೆ: (2)ರ ಪತ್ರದಲ್ಲಿ ಉತ್ತರ ಕನ್ನಡ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿನ ಗೌಡ ಸಾರಸ್ವತ ಬ್ರಾಹ್ಮಣರ ಸಮಾಜಕ್ಕೆ ಸೇರಿದ ಒಟ್ಟು 65 ದೇವಸ್ಥಾನಗಳು ಒಂದು ನಿರ್ದಿಷ್ಟ ಪಂಗಡದ ವತಿಯಿಂದ ಸ್ಥಾಪಿಸಲ್ಪಟ್ಟಿರುವುದರಿಂದ ಸದರಿ ದೇವಸ್ಥಾನಗಳನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಸೆಕ್ಷನ್ 4(ii) ರಂತೆ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ವಿನಾಯಿತಿ ನೀಡಬೇಕೆಂದು ಧಾರ್ಮಿಕ ದತ್ತಿ ಆಯುಕ್ತರು ಕೋರಿರುತ್ತಾರೆ. ಧಾರ್ಮಿಕ ದತ್ತಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 75 ಮುಆಬಿ 2003, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2004**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಸೆಕ್ಷನ್ 4(ii) ರ ಪ್ರಕಾರ ಒಂದು ಹಿಂದೂ ಧಾರ್ಮಿಕ ಪಂಗಡವು ಸ್ಥಾಪಿಸಿರುವ ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ ಎಂದಿರುವುದರಿಂದ ಸರ್ಕಾರವು ಹೊರಡಿಸಿದ

ದಿನಾಂಕ: 30.4.2003ರ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಉತ್ತರ ಕನ್ನಡ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿನ ಈ ಆದೇಶದ ಅನುಬಂಧದಲ್ಲಿ ಸೂಚಿಸಿರುವ ಒಟ್ಟು 65 ದೇವಸ್ಥಾನಗಳನ್ನು ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಸರೋಜ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ).

**ಅನುಬಂಧ**

**ಉತ್ತರ ಕನ್ನಡ ಜಿಲ್ಲಾ ಗೌಡ ಸಾರಸ್ವತ ಬ್ರಾಹ್ಮಣ ಸಮಾಜದ ಅಧಿಸೂಚಿತ ಪಟ್ಟಿಯಿಂದ ವಿನಾಯಿತಿ ಕುರಿತ ದೇವಾಲಯಗಳ ಯಾದಿ**

| | | |
|---|---|---|
| | **ಕುಮಟಾ ತಾಲ್ಲೂಕು** | |
| 1. | ಶ್ರೀ ವೆಂಕಟ್ರಮಣ ದೇವಸ್ಥಾನ, ಕುಮಟಾ | A-407 |
| 2. | ಶ್ರೀ ಮಹಾಲಸಾ ನಾರಾಯಣೀ ದೇವಸ್ಥಾನ, ಕುಮಟಾ | A-525 |
| 3. | ಶ್ರೀ ಕಾವೂರ ಕಾಮಾಕ್ಷೀ ರಾಯೇಶ್ವರ ದೇವಸ್ಥಾನ, ಕುಮಟಾ | A-209 |
| 4. | ಶ್ರೀ ಮಹಾಲಕ್ಷ್ಮೀ ದಾಮೋದರ ದೇವಸ್ಥಾನ, ಕುಮಟಾ | A-364 |
| 5. | ಶ್ರೀ ದೇವಕಿಕೃಷ್ಣ ರವಳನಾಥ ದೇವಸ್ಥಾನ, ಹೆರವಟ್ಟಾ, ಕುಮಟಾ | A-382 |
| 6. | ಶ್ರೀ ವರದ ವಿಠ್ಠಲ ದೇವಸ್ಥಾನ, ಹೆರವಟ್ಟು, ಕುಮಟಾ | A-372 |
| 7. | ಶ್ರೀ ಮಹಾಲಕ್ಷ್ಮೀ ರವಳನಾಥ ದೇವಸ್ಥಾನ, ಹಿರೇಗುತ್ತಿ, ಕುಮಟಾ | A-516 |
| 8. | ಶ್ರೀ ವೆಂಕಟ್ರಮಣ ದೇವಸ್ಥಾನ, ಕಾಗಾಲ, ಕುಮಟಾ | A-279 |
| 9. | ಶ್ರೀ ವೆಂಕಟ್ರಮಣ ದೇವಸ್ಥಾನ, ಉಪ್ಪಿನ ಪಟ್ಟಣ, ಕುಮಟಾ | A-308 |
| 10. | ಶ್ರೀ ವಿಠ್ಠಲ ದೇವಸ್ಥಾನ, ಮಾದನಗೇರಿ, ಕುಮಟಾ | A-397 |
| 11. | ಶ್ರೀ ವಿಠ್ಠಲ ದೇವಸ್ಥಾನ, ಕೊಡಕಣಿ, ಕುಮಟಾ | A-443 |
| | **ಹೊನ್ನಾವರ ತಾಲ್ಲೂಕು** | |
| 12. | ಶ್ರೀ ಮುಖ್ಯಪ್ರಾಣ ಲಕ್ಷ್ಮೀ ವೆಂಕಟೇಶ ದೇವಸ್ಥಾನ, ಹೊಸಾಡ | A-234 |
| 13. | ಶ್ರೀ ಗೋವಿಂದಮೂರ್ತಿ ದೇವ, ಚಿಕ್ಕನಕೋಡ | A-83 |
| 14. | ಶ್ರೀ ಮುಖ್ಯಪ್ರಾಣ ದೇವಸ್ಥಾನ, ಗುಂಡಬಾಳು | A-693 |
| 15. | ಶ್ರೀ ವೆಂಕಟ್ರಮಣ ದೇವ, ಗುಂಡಬಾಳಾ | A-493 |
| 16. | ಶ್ರೀ ಗೋಪಿನಾಥ ವೆಂಕಟ್ರಮಣ ದೇವಸ್ಥಾನ, ಹಳದೀಪುರ | A-48 |
| 17. | ಶ್ರೀ ಹನುಮಂತ ದೇವ, ಹಳದೀಪುರ | A-425 |
| 18. | ಶ್ರೀ ಲಕ್ಷ್ಮೀ ವೆಂಕಟೇಶ ದೇವಸ್ಥಾನ, ಬೆರೊಳ್ಳಿ | |
| 19. | ಶ್ರೀ ಮುಖ್ಯಪ್ರಾಣ ದೇವ, ಹೊನ್ನಾವರ | A-230 |
| 20. | ಶ್ರೀ ಮುಖ್ಯಪ್ರಾಣಾಂತರ್ಗತ ಲಕ್ಷ್ಮೀ ವೆಂಕಟೇಶ ದೇವಸ್ಥಾನ, ಕಂಕುರ್ವೆ | |
| 21. | ಶ್ರೀ ವೀರವಿಠ್ಠಲ ಮುಖ್ಯಪ್ರಾಣ ದೇವ, ಇಡಗುಂಜಿ | A-63 |
| 22. | ಶ್ರೀ ರಾಮಚಂದ್ರ ವೆಂಕಟ್ರಮಣ ದೇವಸ್ಥಾನ, ಹೊನ್ನಾವರ | A-268 |
| 23. | ಶ್ರೀ ವಿಷ್ಣುಮೂರ್ತಿ ದೇವಸ್ಥಾನ, ಕೊಡ್ಲಮನೆ, ಬಳಕೂರು | A-365 |
| 24. | ಶ್ರೀ ಗೋಪಾಲಕೃಷ್ಣ ದೇವ, ಜಲವಳ್ಳಿ | A-101 |
| 25. | ಶ್ರೀ ಗೋಪಾಲಕೃಷ್ಣ ದೇವ, ಮಾವಿನ ಕುರ್ವಾ, ಹೊನ್ನಾವರ | A-456 |
| 26. | ಶ್ರೀ ತಪ್ಪಲದೇವ, ಬಿಂದುಮಾಧವೇಶ್ವರ ದೇವ, ಕಾಸರಕೋಡ | A-436 |
| 27. | ಶ್ರೀ ಮೂಡಗಣಪತಿ ದೇವಸ್ಥಾನ, ಹೊನ್ನಾವರ | A-660 |
| 28. | ಶ್ರೀ ರಾಮಚಂದ್ರ ಮುಖ್ಯಪ್ರಾಣ ದೇವಸ್ಥಾನ, ಹಳದಿಪುರ | A-50 |
| 29. | ಶ್ರೀ ಮುಖ್ಯಪ್ರಾಣ ವೆಂಕಟೇಶ ದೇವಸ್ಥಾನ, ಮಾಲಕೋಡ | A-513 |
| | **ಭಟ್ಕಳ ತಾಲ್ಲೂಕು** | |
| 30. | ಶ್ರೀ ಶಿರಾಲಿಪೇಟೆ ಹನುಮಂತ ದೇವಸ್ಥಾನ, ಪರಂಪಳ್ಳಿ ಛತ್ರ, ಶಿರಾಲಿ | A-429 |
| 31. | ಶ್ರೀ ಲಕ್ಷ್ಮೀವೆಂಕಟ್ರಮಣ ದೇವಸ್ಥಾನ, ಮುರ್ಡೇಶ್ವರ | A-260 |

| | | |
|---|---|---|
| 32. | ಶ್ರೀ ಶಾಂತೇರಿ ಕಾಮಾಕ್ಷಿ ರಾಮನಾಥ ದೇವಸ್ಥಾನ | A-530 |
| 33. | ಶ್ರೀ ವೀರವಿಠ್ಠಲ ದೇವಸ್ಥಾನ, ಭಟ್ಕಳ | |
| 34. | ಶ್ರೀ ತಿರುಮಲ ವೆಂಕಟ್ರಮಣ ದೇವಸ್ಥಾನ, ಭಟ್ಕಳ | |
| 35. | ಶ್ರೀ ರಘುನಾಥ ದೇವಸ್ಥಾನ, ಭಟ್ಕಳ | |
| 36. | ಶ್ರೀ ಲಕ್ಷ್ಮೀನರಸಿಂಹ ದೇವಸ್ಥಾನ, ಮೂಡಭಟ್ಕಳ | |
| 37. | ಶ್ರೀ ಉಮಾಮಹೇಶ್ವರಿ ದೇವಸ್ಥಾನ, ನಾಡಗರ | |
| 38. | ಶ್ರೀ ಲಕ್ಷ್ಮೀನಾರಾಯಣ ದೇವ, ಭಟ್ಕಳ | |
| 39. | ಶ್ರೀ ಆದಿಕೇಶವ ದೇವ, ಮೂಡಭಟ್ಕಳ | A-484 |
| | **ಅಂಕೋಲಾ ತಾಲ್ಲೂಕು** | |
| 40. | ಶ್ರೀ ನಾರಾಯಣ ದೇವ, ಅಂಕೋಲಾ | A-47 |
| 41. | ಶ್ರೀ ಕುಂಡೋದರಿ ದೇವಸ್ಥಾನ, ಅಂಕೋಲಾ | A-39 |
| 42. | ಶ್ರೀ ಲಕ್ಷ್ಮೀನಾರಾಯಣ ಮಹಾಮ್ಮಾಯಾ ದೇವಸ್ಥಾನ, ಅಂಕೋಲಾ | A-356 |
| 43. | ಶ್ರೀ ಕಾತ್ಯಾಯಣಿ ಬಾಣೇಶ್ವರ ದೇವಸ್ಥಾನ, ಅವರ್ಸಾ | A-360 |
| 44. | ಶ್ರೀ ಗಣಪತಿ ಅರವಳ ದೇವತಾ ದೇವಸ್ಥಾನ, ಬೆಳಂಬಾರ | A-650 |
| 45. | ಶ್ರೀ ಲಕ್ಷ್ಮೀನಾರಾಯಣ ದೇವ, ಅವರ್ಸಾ | A-54 |
| | **ಕಾರವಾರ ತಾಲ್ಲೂಕು** | |
| 46. | ಶ್ರೀ ಗಣಪತಿ ರವಳನಾಥ ಮಹಾಮಾಯಾ ಸಂಸ್ಥಾನ, ಗಣಪತಿ ದೇವಸ್ಥಾನ, ಅಸ್ನೋಟಿ | A-537 |
| 47. | ಶ್ರೀ ವೆಂಕಟೇಶ ದೇವಸ್ಥಾನ, ಸುಂಕೇರಿ | A-19 |
| 48. | ಶ್ರೀ ವೆಂಕಟ್ರಮಣ ದೇವ, ಕಡವಾಡ | A-98 |
| 49. | ಶ್ರೀ ಕೃಷ್ಣ ದೇವಸ್ಥಾನ, ಸುಂಕೇರಿ | A-1 |
| | **ಶಿರಸಿ ತಾಲ್ಲೂಕು** | |
| 50. | ಶ್ರೀ ಮಹಾವಿಷ್ಣು ದೇವಸ್ಥಾನ, ಶಿರಸಿ | A-646 |
| 51. | ಶ್ರೀ ಗೋಪಾಲಕೃಷ್ಣ ದೇವಸ್ಥಾನ, ಶಿರಸಿ | A-196 |
| 52. | ಶ್ರೀ ವೆಂಕಟ್ರಮಣ ದೇವಸ್ಥಾನ, ಶಿರಸಿ | A-183 |
| | **ಸಿದ್ದಾಪುರ ತಾಲ್ಲೂಕು** | |
| 53. | ಶ್ರೀ ಲಕ್ಷ್ಮೀವೆಂಕಟ್ರಮಣ ದೇವಸ್ಥಾನ, ಸಿದ್ದಾಪುರ | A-502 |
| 54. | ಶ್ರೀ ರಾಮಚಂದ್ರ ದೇವ, ಬಿಳಗಿ | A-102 |
| 55. | ಶ್ರೀ ಸೀತಾರಾಮಚಂದ್ರ ದೇವ, ಬಿಳಗಿ | A-197 |
| | **ಯಲ್ಲಾಪುರ ತಾಲ್ಲೂಕು** | |
| 56. | ಶ್ರೀ ಗಣಪತಿ ದೇವ, ಯಲ್ಲಾಪುರ | A-132 |
| 57. | ಶ್ರೀ ಗೋಪಾಲಕೃಷ್ಣ ದೇವ, ಯಲ್ಲಾಪುರ | A-120 |
| 58. | ಶ್ರೀ ಹನುಮಂತ ದೇವ, ಅರಬೈಲ | A-127 |
| 59. | ಶ್ರೀ ಮಾರುತಿ ದೇವ, ಜೋಡಕೆರೆ | A-129 |
| 60. | ಶ್ರೀ ಅಗಸೆ ಮಾರುತಿ ದೇವ, ಯಲ್ಲಾಪುರ | A-131 |
| 61. | ಶ್ರೀ ನಾರಾಯಣ ದೇವ, ಯಲ್ಲಾಪುರ | A-160 |
| 62. | ಶ್ರೀ ಮಾರುತಿ ದೇವ, ಯಲ್ಲಾಪುರ | A-593 |
| | **ಹಳಿಯಾಳ ತಾಲ್ಲೂಕು** | |
| 63. | ಶ್ರೀ ಮಾರುತಿ ದೇವ, ಹಳಿಯಾಳ | A-522 |
| 64. | ಶ್ರೀ ವಿಠ್ಠಲ ಮಂದಿರ, ಹಳಿಯಾಳ | A-463 |
| 65. | ಶ್ರೀ ವಿಠ್ಠಲ ಮಂದಿರ, ಹಳಿಯಾಳ | A-471 |

**ಸಿ. ಸರೋಜ**

ಪಿ.ಆರ್. 170 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎನ್. ಮಹಾದೇವ, ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆರ್ಥಿಕ ಆಯೋಗ ಕೋಶ) ಇವರ ಗುತ್ತಿಗೆ ಆಧಾರದ ನೇಮಕಾತಿಯ ವೇತನವನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:**
1) ಅಧಿಸೂಚನೆ ಸಂಖ್ಯೆ: ಸಿಆಸುಇ 336 ಸಅಸೇ 2002, ದಿನಾಂಕ: 28.10.2002.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 336 ಸಅಸೇ 2002, ದಿನಾಂಕ: 4.11.2003.
3) ಶ್ರೀ ಎನ್. ಮಹಾದೇವ, ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆರ್ಥಿಕ ಆಯೋಗ ಕೋಶ) ಇವರ ಟಿಪ್ಪಣಿ ಸಂಖ್ಯೆ: ಎಫ್‌ಡಿ 4095 ಡಿಎಸ್ (ಬಿ ಅಂಡ್ ಆರ್) 2003, ದಿನಾಂಕ: 13.11.2003.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 336 ಸಅಸೇ 2002, ಬೆಂಗಳೂರು, ದಿನಾಂಕ: 5ನೇ ಫೆಬ್ರವರಿ 2004**

ಶ್ರೀ ಎನ್. ಮಹಾದೇವ, ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆರ್ಥಿಕ ಆಯೋಗ ಕೋಶ), ಕರ್ನಾಟಕ ಸರ್ಕಾರ ಸಚಿವಾಲಯ ಇವರ ಗುತ್ತಿಗೆ ಆಧಾರದ ನೇಮಕಾತಿಯ ನಿಬಂಧನೆ ಹಾಗೂ ಷರತ್ತುಗಳಿಗೆ ಸಂಬಂಧಿಸಿದಂತೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 4.11.2003ರ ಸರ್ಕಾರಿ ಆದೇಶವನ್ನು ಮುಂದುವರೆಸುತ್ತಾ, ಶ್ರೀ ಎನ್. ಮಹಾದೇವ ಇವರು ಪಡೆಯುತ್ತಿರುವ ನಿವೃತ್ತಿ ವೇತನ (ರೂ.4920.00) ದೊಂದಿಗೆ ಕೆ.ಸಿ.ಎಸ್.ಆರ್. ನಿಯಮ 313(ಬಿ)ರ ಪ್ರಕಾರ ಮರುನೇಮಕಾತಿ ವೇತನವನ್ನಾಗಿ ರೂ.3642.00 (ರೂ.ಮೂರು ಸಾವಿರದ ಆರು ನೂರಾ ನಲವತ್ತೆರಡು ಮಾತ್ರ) ಗಳನ್ನು ಪಡೆಯಲು ಅರ್ಹರಾಗಿರುತ್ತಾರೆ ಹಾಗೂ ಇವರು ನಿವೃತ್ತಿ ಹೊಂದಿದಾಗ ಪಡೆಯುತ್ತಿದ್ದ (ಮೂಲ ವೇತನದ ರೂ.9840.00) ಮೇಲೆ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ ಹಾಗೂ ನಗರ ಪರಿಹಾರ ಭತ್ಯೆಯನ್ನು ಪಡೆಯಲು ಅರ್ಹರಾಗಿತ್ತಾರೆ. ಆದರೆ, ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿ ಭತ್ಯೆ ಸೇರಿದಂತೆ ಯಾವುದೇ ಇತರ ಭತ್ಯೆಗಳು ಲಭ್ಯವಿರುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 2388 ವೆಚ್ಚ-5:2003, ದಿನಾಂಕ: 16.1.2004 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 171

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಶಿಕ್ಷಣ ಇಲಾಖೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 31 ಸಸಿವಿ 2001, ದಿನಾಂಕ: 24.8.2001.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 57 ಸಸಿವಿ 2002, ದಿನಾಂಕ: 21.10.2002.
3) ಅಧಿಸೂಚನೆ ಸಂಖ್ಯೆ: ಸಿಆಸುಇ 57 ಸಸಿವಿ 2002, ದಿನಾಂಕ: 21.10.2002.
4) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 80 ಸಸಿವಿ 2003, ದಿನಾಂಕ: 23.10.2003.
5) ಅಧಿಸೂಚನೆ ಸಂಖ್ಯೆ: ಸಿಆಸುಇ 80 ಸಸಿವಿ 2003, ದಿನಾಂಕ: 23.10.2003.
6) ಶಿಕ್ಷಣ ಇಲಾಖೆಯ ಕಡತ ಸಂಖ್ಯೆ: ಇಡಿ 36 ಡಿಪಿಐ 2001 (ಭಾಗ).

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಶಿಕ್ಷಣ ಇಲಾಖೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಯನ್ನು ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಎಂದು ಮರು ಪದನಾಮೀಕರಿಸಿ ಈ ಹುದ್ದೆಯನ್ನು ದಿನಾಂಕ: 20.9.2002 ರಿಂದ 19.9.2003 ರವರೆಗೆ ಮುಂದುವರೆಸುವ ಬಗ್ಗೆ ಆದೇಶವನ್ನು ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 21.10.2002ರ ಸರ್ಕಾರಿ ಆದೇಶದಲ್ಲಿ ಹೊರಡಿಸಲಾಗಿರುತ್ತದೆ, ಹಾಗೂ ಈ ಹುದ್ದೆಯಲ್ಲಿ ಶ್ರೀ ಕೆ. ಶ್ರೀಕಂಠೇಶ್ವರ್, ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರನ್ನು ನಿಯೋಜನೆಯ ಮೇರೆಗೆ ಮುಂದುವರೆಸುವ ಬಗ್ಗೆ ಆದೇಶವನ್ನು ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 21.10.2002ರ ಅಧಿಸೂಚನೆಯಲ್ಲಿ ಹೊರಡಿಸಲಾಗಿರುತ್ತದೆ.

ಪ್ರಸ್ತುತ ಶಿಕ್ಷಣ ಇಲಾಖೆಯು ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿನಾಂಕ: 23.10.2003ರ ಸರ್ಕಾರದ ಆದೇಶದಲ್ಲಿ ಈ ಹುದ್ದೆಯನ್ನು ದಿನಾಂಕ: 31.3.2004 ರವರೆಗೆ ಮುಂದುವರೆಸಲಾಗಿರುತ್ತದೆ. ಪ್ರಸ್ತುತ ಈ ಹುದ್ದೆಯನ್ನು ದಿನಾಂಕ: 1.4.2004 ರಿಂದ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 92 ಸಸಿವಿ 2003, ಬೆಂಗಳೂರು, ದಿನಾಂಕ: 5ನೇ ಫೆಬ್ರವರಿ 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಶಿಕ್ಷಣ ಇಲಾಖೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 1.4.2004 ರಿಂದ 31.12.2004 ರವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಸರ್ಕಾರಿ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 172

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದ ನಿರ್ದೇಶಕರು (ತಾಂತ್ರಿಕ) ಹುದ್ದೆಯನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಡಿಇಇ 77 ಇಎನ್‌ವಿ 86, ದಿನಾಂಕ: 4.12.1986.
2) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 28 ಎಸ್‌ಇಎಂ 88, ದಿನಾಂಕ: 25.5.1988.
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 55 ಸಅಸೇ 95, ದಿನಾಂಕ: 28.3.1996.
4) ಡಾ: ಎಂ.ಹೆಚ್. ಬಾಲಕೃಷ್ಣಯ್ಯ, ನಿರ್ದೇಶಕರು (ತಾಂತ್ರಿಕ) ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆ ಇವರ ಮನವಿ ದಿನಾಂಕ: 26.7.2001.
5) ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಪ್ರಕಾ 412:01, ದಿನಾಂಕ: 21.8.2001.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ಮತ್ತು (2) ರಲ್ಲಿ ಓದಲಾದ ಸರ್ಕಾರದ ಆದೇಶಗಳ ಅನ್ವಯ ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆಯಲ್ಲಿ ತಾಂತ್ರಿಕ ಕೋಶವನ್ನು ಸೃಜಿಸಲಾಗಿದ್ದಿತು, ಹಾಗೂ ಈ ತಾಂತ್ರಿಕ ಕೋಶಕ್ಕೆ ಅಗತ್ಯ ತಾಂತ್ರಿಕ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಲಾಗಿದ್ದಿತು. ಇದರಲ್ಲಿ ನಿರ್ದೇಶಕರು (ತಾಂತ್ರಿಕ) ಹುದ್ದೆಯೂ ಸೇರಿರುತ್ತದೆ.

ನಂತರ ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ದಿನಾಂಕ: 28.3.1996ರ ಸರ್ಕಾರದ ಆದೇಶದಲ್ಲಿ ಈ ಹುದ್ದೆಗಳನ್ನು ಖಾಯಂ ಆಧಾರದ ಮೇಲೆ ಮುಂದುವರೆಸಲಾಗಿರುತ್ತದೆ. ಪ್ರಸ್ತುತ ಡಾ: ಎಂ.ಹೆಚ್. ಬಾಲಕೃಷ್ಣಯ್ಯ, ನಿರ್ದೇಶಕರು (ತಾಂತ್ರಿಕ) ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆ ಇವರು ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿನಾಂಕ: 26.7.2001ರ ಮನವಿಯಲ್ಲಿ ತಮಗೆ ಉನ್ನತ ವೇತನ ಶ್ರೇಣಿಯನ್ನು ನೀಡಿ ತಾವು ನಿರ್ವಹಿಸುತ್ತಿರುವ ಹುದ್ದೆಯನ್ನು 'ಹಿರಿಯ ನಿರ್ದೇಶಕರು '(ತಾಂತ್ರಿಕ)' ಹುದ್ದೆ ಎಂದು ಉನ್ನತೀಕರಿಸುವಂತೆ ಕೋರಿರುತ್ತಾರೆ. ಪ್ರಧಾನ ಕಾರ್ಯದರ್ಶಿಗಳು, ಅರಣ್ಯ ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆ ಇವರು ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ: 21.8.2001ರ ಟಿಪ್ಪಣಿಯಲ್ಲಿ ಡಾ: ಎಂ.ಹೆಚ್. ಬಾಲಕೃಷ್ಣಯ್ಯ, ಇವರು ಹೊಂದಿರುವ ನಿರ್ದೇಶಕರು (ತಾಂತ್ರಿಕ) ಹುದ್ದೆಯನ್ನು ಸರ್ಕಾರದ ಅಪರ ಕಾರ್ಯದರ್ಶಿ ಹುದ್ದೆಯ ವೇತನ ಶ್ರೇಣಿಗೆ ಸಮನಾದ ಹಿರಿಯ ನಿರ್ದೇಶಕರು (ತಾಂತ್ರಿಕ) ಹುದ್ದೆ ಎಂದು ಉನ್ನತೀಕರಿಸಿ ಡಾ: ಎಂ.ಹೆಚ್. ಬಾಲಕೃಷ್ಣಯ್ಯ ಇವರಿಗೆ ಬಡ್ತಿ ನೀಡಿ ಸದರಿ ಹುದ್ದೆಯಲ್ಲಿ ಮುಂದುವರೆಸುವಂತೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 211 ಸಅಸೇ 2001, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2004**

ಕರ್ನಾಟಕ ಸರ್ಕಾರ ಸಚಿವಾಲಯದ, ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ರೂ.12800-16720ರ ವೇತನ ಶ್ರೇಣಿಯ ನಿರ್ದೇಶಕರು, (ತಾಂತ್ರಿಕ) ಹುದ್ದೆಯನ್ನು ಈ ಹುದ್ದೆಯ ಪದಧಾರಕರಾದ ಡಾ: ಎಂ.ಹೆಚ್. ಬಾಲಕೃಷ್ಣಯ್ಯ ಇವರು ಉನ್ನತ ಶ್ರೇಣಿ ಬಡ್ತಿ ಹೊಂದಿದ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಈ ಹುದ್ದೆಯಲ್ಲಿ ಡಾ: ಎಂ.ಹೆಚ್. ಬಾಲಕೃಷ್ಣಯ್ಯ ಇವರು ಮುಂದುವರೆಯುವ ಅವಧಿಗೆ ಮಾತ್ರ ರೂ.13820-17220 ಗಳ ವೇತನ ಶ್ರೇಣಿಯ ಹಿರಿಯ ನಿರ್ದೇಶಕರು (ತಾಂತ್ರಿಕ) ಹುದ್ದೆ ಎಂದು ಉನ್ನತೀಕರಿಸಲಾಗಿದೆ.

ಈ ಉನ್ನತೀಕರಿಸಲಾದ ಹುದ್ದೆಯನ್ನು ನಿರ್ದೇಶಕರು (ತಾಂತ್ರಿಕ) ಹುದ್ದೆಯಲ್ಲಿ ಕನಿಷ್ಟ 5 ವರ್ಷಗಳ ಸೇವೆಯನ್ನು ಪೂರೈಸಿರುವ ಅಧಿಕಾರಿಗೆ ಬಡ್ತಿ ನೀಡುವ ಮೂಲಕ ಭರ್ತಿ ಮಾಡಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 1609 ವೆಚ್ಚ-5:2002 ದಿನಾಂಕ: 3.1.2003 ರಲ್ಲಿ ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸೇವಾ ನಿಯಮ ಶಾಖೆಯು ಟಿಪ್ಪಣಿ ಸಂಖ್ಯೆ: ಸಿಆಸುಇ 5 ಸೇನಿಡಿ 2003, ದಿನಾಂಕ: 17.3.2003 ರಲ್ಲಿ ನೀಡಿರುವ ಸಹಮತಿಯ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 173

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಜಲ ಸಂಪನ್ಮೂಲ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 2 ಸಸಿವಿ 2002, ದಿನಾಂಕ: 25.1.2002.
2) ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಆಸುಇ 1 ಎಸ್‌ಎಎಸ್ 2003, ದಿನಾಂಕ: 22.1.2003.
3) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 6 ಸಸಿವಿ 2003, ದಿನಾಂಕ: 3.2.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 25.1.2002ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ದಿನಾಂಕ: 18.1.2002 ರಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| | | |
|---|---|---|
| 1. | ಪ್ರಧಾನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಐ.ಎ.ಎಸ್. ಅಧಿಕಾರಿಯಿಂದ ತುಂಬುವುದು) | 1 |
| 2. | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್-2 / ಪತ್ರಾಂಕಿತ ಆಪ್ತ ಸಹಾಯಕ) | 1 |
| 3. | ಶೀಘ್ರಲಿಪಿಗಾರ (ಪತ್ರಾಂಕಿತ ಆಪ್ತ ಸಹಾಯಕ / ಹಿರಿಯ ಶೀಘ್ರಲಿಪಿಗಾರ) | 2 |
| 4. | ಭಾಷಾಂತರಕಾರರು (ಶಾಖಾಧಿಕಾರಿ / ಹಿರಿಯ ಸಹಾಯಕ) | 1 |
| 5. | ಸಹಾಯಕ / ಕಿರಿಯ ಸಹಾಯಕ | 1 |
| 6. | ವಾಹನ ಚಾಲಕ | 2 |
| 7. | ದಲಾಯತ್ | 2 |
| | **ಒಟ್ಟು** | **9 ಹುದ್ದೆಗಳು** |

ನಂತರ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 3.2.2003ರ ಸರ್ಕಾರಿ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ: 18.1.2003 ರಿಂದ 31.12.2003 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿರುತ್ತದೆ. ಪ್ರಸ್ತುತ ಈ ಹುದ್ದೆಗಳ ವಿಸ್ತರಿತ ಕಾಲಾವಧಿಯು ದಿನಾಂಕ: 31.12.2003ಕ್ಕೆ ಮುಕ್ತಾಯಗೊಂಡಿರುವ ಹಿನ್ನೆಲೆಯಲ್ಲಿ ಈ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 7 ಸಸಿವಿ 2004, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಜಲ ಸಂಪನ್ಮೂಲ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪ್ರಸ್ತಾವನೆಯಲ್ಲಿ ವಿವರಿಸಿರುವ ಪೂರಕ ಎಂಟು ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.1.2004 ರಿಂದ 31.12.2004 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

ಸದರಿ ಸರ್ಕಾರದ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.7.96 ರನ್ವಯ ನೀಡಿರುವ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 174

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ಕಾರ್ಮಿಕ ಸಚಿವಾಲಯ**

**ವಿಷಯ:** ಕೇಂದ್ರ ಪುರಸ್ಕೃತ ಯೋಜನೆಯಡಿ ಸ್ಥಾಪಿತವಾಗಿರುವ ಅಂಗವಿಕಲ ವಿಶೇಷ ಉದ್ಯೋಗ ವಿನಿಮಯ ಕಛೇರಿಗಳು: ಘಟಕಗಳನ್ನು ಮುಕ್ತಾಯಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅರೆ ಸರ್ಕಾರಿ ಪತ್ರ ಸಂಖ್ಯೆ: ಕಾಇ 1 ಇಟಿಎಂ 2002, ದಿನಾಂಕ: 22.08.2003.

2) ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಅವರ ಪತ್ರ ಸಂಖ್ಯೆ: ಉತನಿ:ಉದ್ಯೋಗ:ಯೋಜನೆ-6: ವಿವ-10:2003-2004, ದಿನಾಂಕ: 03.09.2003.

**ಪ್ರಸ್ತಾವನೆ:**

ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಅವರು ದಿನಾಂಕ: 03.09.2003ರ ಪತ್ರದಲ್ಲಿ (ಓದಲಾಗಿದೆ ಕ್ರಮ ಸಂಖ್ಯೆ:2) 1999ರ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಪರಿಣಾಮವಾಗಿ ಇತ್ತೀಚಿನ ದಿನಗಳಲ್ಲಿ ಕೇಂದ್ರ ಪುರಸ್ಕೃತ ಯೋಜನೆಯಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕಛೇರಿ ಮೈಸೂರು, ಹುಬ್ಬಳ್ಳಿ ಮತ್ತು ಗುಲ್ಬರ್ಗಾ ಹಾಗೂ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೆಳಗಾಂ ಮತ್ತು ಮಂಗಳೂರು ಇಲ್ಲಿ ಕಾರ್ಯನಿರ್ವಹಿಸುತ್ತಿರುವ ವಿಶೇಷ ಘಟಕಗಳಲ್ಲಿ ಕೆಲಸ ಕಾರ್ಯಗಳು ಬಹಳಷ್ಟು ಕುಂಠಿತವಾಗಿದ್ದು ಉದ್ಯೋಗ ಪಡೆಯುತ್ತಿರುವವರ ಸಂಖ್ಯೆ: ಗಣನೀಯವಾಗಿ ಕಡಿಮೆಯಾಗುತ್ತಿದೆಯೆಂದು ತಿಳಿಸಿರುತ್ತಾರೆ. ಅಲ್ಲದೆ 2004-05ನೇ ಸಾಲಿನಿಂದ ಈ ವಿಶೇಷ ಕಛೇರಿಗಳಿಗೆ : ಘಟಕಗಳಿಗೆ ಕೇಂದ್ರ ಸರ್ಕಾರವು ನೀಡುತ್ತಲಿದ್ದ ಧನ ಸಹಾಯವನ್ನು ನೀಡುವ ಸೂಚನೆ ಇರುವುದಿಲ್ಲವಾದ್ದರಿಂದ 03 ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕೇಂದ್ರಗಳು, ಮೈಸೂರು, ಹುಬ್ಬಳ್ಳಿ ಮತ್ತು ಗುಲ್ಬರ್ಗಾ ಹಾಗೂ ಬೆಳಗಾಂ ಮತ್ತು ಮಂಗಳೂರಿನಲ್ಲಿರುವ ವಿಶೇಷ ಅಂಗವಿಕಲರ ಘಟಕಗಳನ್ನು ಮುಚ್ಚಲು ಮತ್ತು ಅವುಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ : ಸಿಬ್ಬಂದಿ ವರ್ಗದವರನ್ನು ಇಲಾಖೆಯ ಉದ್ಯೋಗ ವಿಭಾಗದ ಅನ್ಯ ಕಛೇರಿಗಳಲ್ಲಿ ಖಾಲಿ ಇರುವ ತತ್ಸಮಾನ ಹುದ್ದೆಗಳಿಗೆ ಪುನರ್ ನಿಯೋಜಿಸಿ ಸರ್ಕಾರದ ಆದೇಶ ನೀಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶ:-

**ಸರ್ಕಾರಿ ಆದೇಶ ಸಂಖ್ಯೆ: ಕಾಇ 48 ಇಟಿಎಕ್ಸ್ 2003, ಬೆಂಗಳೂರು, ದಿನಾಂಕ: 5ನೇ ಫೆಬ್ರವರಿ 2004**

ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದಲ್ಲಿರುವ ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕಛೇರಿಗಳಾದ ಮೈಸೂರು, ಗುಲ್ಬರ್ಗಾ ಮತ್ತು ಹುಬ್ಬಳ್ಳಿ ಹಾಗೂ ಅಂಗವಿಕಲರ ವಿಶೇಷ ಘಟಕಗಳಾದ ಮಂಗಳೂರು ಮತ್ತು ಬೆಳಗಾಂ ಘಟಕಗಳನ್ನು ತಕ್ಷಣವೇ ಜಾರಿಗೆ ಬರುವಂತೆ ಮುಚ್ಚಲು ಹಾಗೂ ಸದರಿ ಕಛೇರಿ : ಘಟಕಗಳ ಅಧಿಕಾರಿ : ಸಿಬ್ಬಂದಿ ವರ್ಗದವರನ್ನು ಮತ್ತು ಸಂಬಂಧಿಸಿದ ದಾಖಲಾತಿಗಳನ್ನು ಅನುಬಂಧದಲ್ಲಿ ನಮೂದಿಸಿರುವಂತೆ ಇತರೆ ಜಿಲ್ಲಾ ಮಟ್ಟದ ಸಂಬಂಧಿಸಿದ ಸಾಮಾನ್ಯ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ವಿಲೀನಗೊಳಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಸುಬ್ರಮಣ್ಯರಾವ್**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

**ಸರ್ಕಾರಿ ಆದೇಶ ಸಂಖ್ಯೆ: ಕಾಇ 48 ಇಟಿಎಕ್ಸ್ 2003, ಬೆಂಗಳೂರು, ದಿನಾಂಕ: 05.02.2004ಕ್ಕೆ ಅನುಬಂಧ**

ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕೇಂದ್ರ : ಘಟಕಗಳಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ : ಸಿಬ್ಬಂದಿಯನ್ನು ಹಾಗೂ ದಾಖಲಾತಿಗಳನ್ನು ಈ ಕೆಳಗೆ ವಿವರಿಸಿರುವಂತೆ ಇಲಾಖೆಯ ಉದ್ಯೋಗ ವಿಭಾಗದ ಅನ್ಯ ಕಛೇರಿಗಳಲ್ಲಿ ಖಾಲಿ ಇರುವ ಹುದ್ದೆಗಳಿಗೆ ಮರುಹೊಂದಾಣಿಕೆ ಮಾಡಿ ನಿಯೋಜಿಸಲಾಗಿದೆ.

| ಕ್ರ. ಸಂ. | ಕಛೇರಿಯ ಹೆಸರು | ಉದ್ಯೋಗಿಯ ಹೆಸರು ಮತ್ತು ಪದನಾಮ | ವಿಲೀನಗೊಳಿಸಲಾಗುವ ಕಛೇರಿಗಳಲ್ಲಿ ಪ್ರಸ್ತುತ ಖಾಲಿ ಇರುವ ತತ್ಸಮಾನ ಹುದ್ದೆಗಳು |
|---|---|---|---|
| 1. | ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕಛೇರಿ, ಮೈಸೂರು. | ಶ್ರೀ ಜಿ.ಹೆಚ್. ಅನಂತರಾಮು, ಸಹಾಯಕ ನಿರ್ದೇಶಕರು | ಉಪ ಮುಖ್ಯಸ್ಥರು, ವಿಶ್ವವಿದ್ಯಾನಿಲಯ ಉದ್ಯೋಗ ಮಾಹಿತಿ ಮಾರ್ಗದರ್ಶನ ಕೇಂದ್ರ, ಮಂಗಳೂರು. |
| | | ಶ್ರೀ ಬಿ. ಸಿದ್ದನಂಜಪ್ಪ, ಸಹಾಯಕ ಉದ್ಯೋಗಾಧಿಕಾರಿ, | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಾಮರಾಜನಗರ. |
| | | ಶ್ರೀಮತಿ ಕೆ.ಎನ್. ಮಂಜುಳಾ, ಪ್ರ.ದ.ಸ. | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಜಾರಿ ಘಟಕ, ಮೈಸೂರು. |
| | | ಶ್ರೀ ಮಹಮದ್‌ಸಿಬಗತುಲ್ಲಾ, ದ್ವಿ.ದ.ಸ. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಾಮರಾಜನಗರ. |
| | | ಶ್ರೀ ಗುರುಸ್ವಾಮಿ, ದ್ವಿ.ದ.ಸ. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹಾವೇರಿ. |
| | | ಶ್ರೀ ವಿ. ನವೀನ್‌ಕುಮಾರ್, ಬೆರಳಚ್ಚುಗಾರರು. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಾಮರಾಜನಗರ. |
| | | ಶ್ರೀ ಹೆಚ್. ಹನುಮಂತನಾಯ್ಕ, ಗ್ರೂಪ್ 'ಡಿ' | ನಿರ್ದೇಶನಾಲಯ, ಬೆಂಗಳೂರು. |
| | | ಶ್ರೀಮತಿ ಮಹದೇವಮ್ಮ, ಗ್ರೂಪ್ 'ಡಿ' | ನಿರ್ದೇಶನಾಲಯ, ಬೆಂಗಳೂರು. |
| 2. | ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಹುಬ್ಬಳ್ಳಿ. | ಶ್ರೀ ವಿ.ಬಿ. ಮತ್ತೂರ್, ಸಹಾಯಕ ನಿರ್ದೇಶಕರು. | ವಿಶ್ವವಿದ್ಯಾನಿಲಯ ಉದ್ಯೋಗ ಮಾಹಿತಿ ಮಾರ್ಗದರ್ಶನ ಕೇಂದ್ರ, ಧಾರವಾಡ. |
| | | ಶ್ರೀ ಸಿ.ಎಸ್. ಆನಂದ್, ಸಹಾಯಕ ಉದ್ಯೋಗಾಧಿಕಾರಿ, | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಹುಬ್ಬಳ್ಳಿ. |
| | | ಶ್ರೀ ವಿ.ಆರ್. ಮನಗುಂಡಿ, ಗ್ರೂಪ್ 'ಡಿ' | ಉದ್ಯೋಗ ವಿನಿಮಯ ಕೇಂದ್ರಗಳ (ಖಾಹುಕಅ) ಜಾರಿ ಘಟಕ, ಹುಬ್ಬಳ್ಳಿ. |
| 3. | ಅಂಗವಿಕಲರ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಗುಲ್ಬರ್ಗಾ. | ಶ್ರೀಮತಿ ಸೀಮಾದೇವಿ ಎಸ್. ದಣ್ಣೂರ್, ಬೆರಳಚ್ಚುಗಾರರು. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ರಾಯಚೂರು. |
| | | ಶ್ರೀ ಜಹೀರ್ ಅಹ್ಮದ್, ಗ್ರೂಪ್ 'ಡಿ' | ವಿಶ್ವವಿದ್ಯಾನಿಲಯ ಉದ್ಯೋಗ ಮಾಹಿತಿ ಮಾರ್ಗದರ್ಶನ ಕೇಂದ್ರ, ಗುಲ್ಬರ್ಗಾ. |
| 4. | ಅಂಗವಿಕಲರ ವಿಶೇಷ ಘಟಕ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಂಗಳೂರು. | ಶ್ರೀ ಪಿ. ಚಂದ್ರಹಾಸ, ಸಹಾಯಕ ಉದ್ಯೋಗಾಧಿಕಾರಿ. | ಜಿಲ್ಲಾ ಉದ್ಯೋಗ ವಿನಿಮಯ, ಕೇಂದ್ರ, ಚಿಕ್ಕಮಗಳೂರು. |
| 5. | ಅಂಗವಿಕಲರ ವಿಶೇಷ ಘಟಕ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೆಳಗಾಂ. | ಶ್ರೀ ಬಿ.ಆರ್. ಪಾಟೀಲ್, ಸಹಾಯಕ ಉದ್ಯೋಗಾಧಿಕಾರಿ. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬಿಜಾಪುರ. |
| | | ಶ್ರೀ ರವಿಶಂಕರ್‌ಚನಾಳ್, ಬೆರಳಚ್ಚುಗಾರರು. | ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಬೆಳಗಾಂ. |

**ಎನ್. ಸುಬ್ರಮಣ್ಯರಾವ್**

ಪಿ.ಆರ್. 175 ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

## ಶಿಕ್ಷಣ ಸಚಿವಾಲಯ

**ವಿಷಯ:** ಪದವಿಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶನಾಲಯದಲ್ಲಿರುವ ಶಾಖಾಧಿಕಾರಿ ಹುದ್ದೆಗಳನ್ನು ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಡಿ 584 ಡಿಪಿಐ 95, ದಿನಾಂಕ: 30.4.97 ಮತ್ತು 15.10.98.
2) ಸರ್ಕಾರಿ ಆದೇಶ ಸಂಖ್ಯೆ: ಇಡಿ 330 ಡಿಪಿಐ 97, ದಿನಾಂಕ: 10.6.1999.
3) ಪದವಿಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಪಪೂಶಿ:ಸಿಬ್ಬಂದಿ:ಸಿಆರ್-210:99, ದಿನಾಂಕ: 9.8.1999.
4) ಸರ್ಕಾರದ ಆದೇಶ ಸಂಖ್ಯೆ: ಇಡಿ 212 ಡಿಪಿಐ 99, ದಿನಾಂಕ: 21.12.1999.
5) ನಿರ್ದೇಶಕರು, ಪಪೂಶಿಇ ಇವರ ಪ.ಸಂ. ಪಪೂಶಿಇ. ಸಿಬ್ಬಂದಿ-138:2002, ದಿನಾಂಕ: 27.9.2002.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಪದವಿಪೂರ್ವ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಸೇರಿದ ಉಪನಿರ್ದೇಶಕರು : ವಿಷಯತಜ್ಞರ ಹುದ್ದೆಗಳನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ವಿಭಾಗೀಯ ಸಹ ನಿರ್ದೇಶಕರ ಕಛೇರಿಗಳಿಂದ ಬೇರ್ಪಡಿಸಿ ಆಡಳಿತಾತ್ಮಕ ಹಿತದೃಷ್ಟಿಯಿಂದ ಪ್ರತಿ ಜಿಲ್ಲೆಗೆ ಒಂದರಂತೆ ಹೊಸದಾಗಿ ಪ್ರಾರಂಭಿಸಲಾದ ಪದವಿಪೂರ್ವ ಶಿಕ್ಷಣ ಇಲಾಖೆಯ ಜಿಲ್ಲಾ ಮಟ್ಟದ ಕಛೇರಿಗಳಿಗೆ ಸ್ಥಳಾಂತರಿಸಲಾಗಿದೆ.

ನೂತನವಾಗಿ ಪ್ರಾರಂಭಿಸಲಾದ ಕಛೇರಿಯ ಆಡಳಿತ ನಿರ್ವಹಣೆಗೆ ಮತ್ತು ಉಪನಿರ್ದೇಶಕರುಗಳಿಗೆ ಸಹಾಯಕವಾಗಿ ಕಾರ್ಯನಿರ್ವಹಿಸಲು ಕೆಲವೊಂದು ಷರತ್ತುಗಳನ್ನು ವಿಧಿಸಿ ಪೂರಕ ಸಿಬ್ಬಂದಿಗಳ ನಮೂನೆಯನ್ನು ನಿಗದಿಪಡಿಸಿ ಈ ಹುದ್ದೆಗಳಿಗೆ ರೀಡಿಪ್ಲಾಯ್‌ಮೆಂಟ್ ಮುಖಾಂತರ ತುಂಬುವ ವ್ಯವಸ್ಥೆ ಮಾಡಲು ಮೇಲೆ ಓದಲಾದ (2)ರ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ.

ಪದವಿಪೂರ್ವ ಶಿಕ್ಷಣ ಇಲಾಖೆಯ ಕೇಂದ್ರ ಕಛೇರಿಯಲ್ಲಿ ಕಡತಗಳ ಶೀಘ್ರ ವಿಲೇವಾರಿಯ ದೃಷ್ಟಿಯಿಂದ ಶಾಖಾಧಿಕಾರಿಗಳ ಹುದ್ದೆಗಳ ಅಗತ್ಯತೆ ಕೇಂದ್ರ ಕಛೇರಿಯಲ್ಲಿ ಅಗತ್ಯವಿಲ್ಲವೆಂದು ತಿಳಿಸಿ ಅಲ್ಲಿರುವ 6 ಹುದ್ದೆಗಳನ್ನು ಕಾರ್ಯಭಾರವಿರುವ 6 ಜಿಲ್ಲಾ ಉಪನಿರ್ದೇಶಕರ ಕಛೇರಿಗೆ ಸ್ಥಳಾಂತರಿಸುವಂತೆ ಮೇಲೆ ಓದಲಾದ (3)ರ ದಿನಾಂಕ: 9.8.1999ರ ಪತ್ರದಲ್ಲಿ ಕೋರಿದ್ದರು. ನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ ಇವರ ಕೋರಿಕೆ ಮೇರೆಗೆ ಪದವಿಪೂರ್ವ ಶಿಕ್ಷಣ ಇಲಾಖೆಯ ಬೆಂಗಳೂರು ಉತ್ತರ ತುಮಕೂರು, ಕೋಲಾರ, ಮೈಸೂರು, ದಾವಣಗೆರೆ ಹಾಗೂ ಬೆಳಗಾಂ ಜಿಲ್ಲೆಗಳಲ್ಲಿರುವ ಉಪನಿರ್ದೇಶಕರುಗಳ ಕಛೇರಿಗೆ ರೂ.5200-9580ರ ವೇತನ ಶ್ರೇಣಿಯ ಅಧೀಕ್ಷಕರ ಹುದ್ದೆಯಲ್ಲಿ ಪದವಿಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶನಾಲಯದಲ್ಲಿನ ಲಿಪಿಕ ವೃಂದದಲ್ಲಿ ರೂ.6000-11200ರ ವೇತನ ಶ್ರೇಣಿಯ ಶಾಖಾಧಿಕಾರಿ ಹುದ್ದೆಗಳನ್ನು ಮೇಲೆ ಓದಲಾದ ದಿನಾಂಕ: 21.12.1999ರ ಆದೇಶದಲ್ಲಿ ಸ್ಥಳಾಂತರಿಸಿ ಸ್ಥಾಪಿಸಲಾಗಿದೆ. ಅದೂ ಅಲ್ಲದೆ ಎಲ್ಲಾ ಕಛೇರಿಗಳಿಂದ ಸೂಪರ್‌ನ್ಯೂಮರರಿ ಮಟ್ಟದ ಹುದ್ದೆಗಳಲ್ಲಿ ಏಕರೂಪತೆ ಇರುವುದು ಅಗತ್ಯವಾದ ಕಾರಣ ಈ 6 ಶಾಖಾಧಿಕಾರಿ ಹುದ್ದೆಗಳು, ಈ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವವರು ನಿವೃತ್ತಿ ಅಥವಾ ಬಡ್ತಿ ಇನ್ನಿತರೆ ಯಾವುದೇ ಕಾರಣಗಳಿಂದ ಖಾಲಿ ಆದಾಗ ಸದರಿ ಶಾಖಾಧಿಕಾರಿ ಹುದ್ದೆಗಳನ್ನು ಅಧೀಕ್ಷಕರ ಹುದ್ದೆಯ ಮಟ್ಟಕ್ಕೆ ಇಳಿಸುವಂತೆ ಆದೇಶಿಸಲಾಗಿದೆ.

ಮೇಲೆ ಓದಲಾಗಿರುವ (5)ರ ದಿನಾಂಕ: 27.9.2002 ರಲ್ಲಿ ಪದವಿಪೂರ್ವ ಶಿಕ್ಷಣ ಇಲಾಖೆಯು 1970 ರಲ್ಲಿ ಅಸ್ತಿತ್ವಕ್ಕೆ ಬಂದಿದ್ದು, ಅಂದಿನಿಂದ ಲಿಪಿಕ ವರ್ಗದ 6 ಶಾಖಾಧಿಕಾರಿ ಹುದ್ದೆಗಳು (ಗ್ರೂಪ್-ಬಿ) ಮಂಜೂರಾಗಿರುತ್ತವೆ. ಆ ಸಮಯದಲ್ಲಿ ಕೇಂದ್ರ ಕಛೇರಿಯಲ್ಲಿನ ಕಾರ್ಯಭಾರವನ್ನು ವೀಕ್ಷಿಸಿ ಅವುಗಳನ್ನು ಈ ಹಿಂದೆ ಉಪನಿರ್ದೇಶಕರುಗಳ ಕಛೇರಿಗಳಿಗೆ ಸ್ಥಳಾಂತರಿಸಿ ಆದೇಶಿಸಲಾಗಿತ್ತು. ಇತ್ತೀಚೆಗೆ ಕೇಂದ್ರ ಕಛೇರಿಯಲ್ಲಿ ಗಣನೀಯ ಪ್ರಮಾಣದಲ್ಲಿ ಇಲಾಖೆಯ ಕಾರ್ಯಒತ್ತಡ ಹೆಚ್ಚಾಗಿದ್ದು ಇದರಿಂದ ಉಪನಿರ್ದೇಶಕರು ಹಾಗೂ ಪ್ರಾಂಶುಪಾಲರ ಸಂಖ್ಯೆಯು ನೂತನ ಕಾಲೇಜುಗಳ ಪ್ರಾರಂಭದಿಂದಾಗಿ ಹೆಚ್ಚಾಗಿದ್ದು ಲಿಪಿಕ ವೃಂದದ ಹುದ್ದೆಗಳು ಆ ಪ್ರಮಾಣದಲ್ಲಿ ಹೆಚ್ಚಿರುವುದಿಲ್ಲ. ಆದುದರಿಂದ ಉಪ ನಿರ್ದೇಶಕರುಗಳ ಕಛೇರಿಗಳಿಗೆ ಸ್ಥಳಾಂತರಿಸಲಾದ ಶಾಖಾಧಿಕಾರಿ ಹುದ್ದೆಗಳನ್ನು ಆ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳೊಂದಿಗೆ ಕೇಂದ್ರ ಕಛೇರಿಗೆ ಸ್ಥಳಾಂತರಿಸಲು ಪದವಿಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 46 ಡಿಪಿಐ 2000, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2004**

1. ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಪದವಿಪೂರ್ವ ಶಿಕ್ಷಣ ಇಲಾಖೆಯ ಬೆಂಗಳೂರು ಉತ್ತರ, ತುಮಕೂರು, ಕೋಲಾರ, ಮೈಸೂರು ದಾವಣಗೆರೆ ಹಾಗೂ ಬೆಳಗಾಂ ಜಿಲ್ಲೆಗಳಲ್ಲಿ ಉಪನಿರ್ದೇಶಕರ ಕಛೇರಿಗಳಲ್ಲಿರುವ ರೂ.6000-11200ರ ವೇತನ ಶ್ರೇಣಿಯ ಶಾಖಾಧಿಕಾರಿ ಹುದ್ದೆಗಳನ್ನು ಪದವಿಪೂರ್ವ ಶಿಕ್ಷಣ ನಿರ್ದೇಶನಾಲಯಕ್ಕೆ ಈ ಮೂಲಕ ಸ್ಥಳಾಂತರಿಸಿದೆ.

2. ದಿನಾಂಕ: 20.12.1999ರ ಸರ್ಕಾರಿ ಆದೇಶ ಸಂಖ್ಯೆ: ಇಡಿ 212 ಡಿಪಿಐ 99 ರಲ್ಲಿ ನಿರ್ದೇಶಿಸಿರುವಂತೆ ಈ 6 ಶಾಖಾಧಿಕಾರಿ ಹುದ್ದೆಗಳು ಅದರಲ್ಲಿ ಕಾರ್ಯನಿರ್ವಹಿಸುತ್ತಿರುವವರ ನಿವೃತ್ತಿ ಅಥವಾ ಬಡ್ತಿ ಇನ್ನಿತರೆ ಯಾವುದೇ ಕಾರಣದಿಂದ ಖಾಲಿ ಆದಾಗ ಸದರಿ ಶಾಖಾಧಿಕಾರಿ ಹುದ್ದೆಗಳು ಅಧೀಕ್ಷಕರ ಹುದ್ದೆಗೆ ತಂತಾನೆ ಇಳಿಯುತ್ತವೆ.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿಯನ್ನು ದಿನಾಂಕ: 7.1.2004ರ ಟಿಪ್ಪಣಿ ಸಂಖ್ಯೆ: ಆಇ-1112:ವೆಚ್ಚ-8: 2003 ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2).

ಪಿ.ಆರ್. 176

## FOREST, ECOLOGY AND ENVIRONMENT SECRETARIAT

**Sub:** The Amendment to the Karnataka Forest Code.

**Read:** 1) G.O.FFD 19 FDP 75, Dated 19-02-1976.
2) G.O.No.FEE 115 FDP 2001, Dated 25-11-2001.

**Preamble**:

The Karnataka Forest Code was approved by the Government read at (1) above. Appendix – XVIII of the Code pertains to the procedure to be followed for conducting auction sale of timber.

The Government had vide Government Order read at (2) above constituted a Committee to examine and suggest simplification of the procedure of auction sale in the Government Timber Depots of the State.

